ಮಕ್ಕಳ ಮುತ್ತುಗಳು.

# ಹುಲಿರಾಯ.

ಶಿವರಾಮ ಕಾರಂತ.

ಬಾಲಸಾಹಿತ್ಯಮಂಡಲ, ಲಿಮಿಟೆಡ್, ಕೊಡಿಯಾಲಬೈಲು,
ಮಂಗಳೂರು.

1932

# ಹುಲಿರಾಯ

## 1. "ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ."

ನೇತ್ರಾವತಿ ದಂಡೆಯಲ್ಲಿ ಪ್ರೋಳೂರು ಎಂಬೊಂದು ಹಳ್ಳಿ ಯಿತ್ತು. ಈಗ ಆ ಹಳ್ಳಿಗೆ ಏನು ಹೆಸರು ಬಂದಿದೆಯೋ ಏನೋ; ಅಂತು ಪ್ರೋಳೂರೆಂಬ ಹಳ್ಳಿಯೇ ಉಳಿದಿಲ್ಲ. ಆಗ ಪ್ರೋಳೂರು ಬಲು ಹೆಸರುವಾಸಿಯಾದ ಊರು. ನದಿಯು ಮೇಲೂ ಕೆಳಕ್ಕೂ ಹೋಗುವ ದೋಣಿಗಳು ಬಂದು ನಿಲ್ಲುವ ಸ್ಥಳ. ಸಂಜೆಯಾಯಿತೆಂದರೆ ಅಲ್ಲಿಂದ ನೂರಾರು ದೋಣಿಗಳು ಕೆಳಕ್ಕೆ ಹೋಗುವುವು. ಬೆಳಗಾಯಿತೆಂದರೆ ನೂರಾರು ದೋಣಿಗಳು ಬಂದು ಸೇರುವುವು. ಈ ದೋಣಿಯು ಕಡವಿನ ಬಳಿಯಲ್ಲಿ ಒಂದೇ ಒಂದು ಬಡ ಗುಡಿಸಲಿತ್ತು. ಸುತ್ತಲೂ ಕಾಡುಗಳು ಬೆಳೆದಿದ್ದುದರಿಂದ ಜನರಾರೂ ಅಲ್ಲಿ ಮನೆಮಾಡಿಕೊಂಡಿರಲು ಇಷ್ಟಪಡುತ್ತಿರಲಿಲ್ಲ. ಈ ಒಂದು ಮನೆಯವರು ಮಾತ್ರ, ಎಷ್ಟು ವರುಷಗಳಿಂದೆಂದು ತಿಳಿಯದು, ಅಲ್ಲೇ ನೆಲೆಯಾಗಿದ್ದರು. ಆ ಮನೆಯವರೆಂದರೆ ಇಬ್ಬರೇ; ಗಂಡಹೆಂಡಿರು ಅವರು. ಸುಬ್ಬು, ಲಚುಮಿ, ಎಂದು ಅವರ ಹೆಸರು. ಆ ಕಾಡಿನ ಎಡೆಯಲ್ಲಿ ಅವರಿಗೆ ಬೇಸಾಯ ಮಾಡಿಕೊಂಡಿರಲು ಯಾವ ಅನುಕೂಲತೆಗಳೂ ಇದ್ದಿರಲಿಲ್ಲ. ದೋಣಿ ನಿಲ್ಲಿಸಿಕೊಂಡ ಪ್ರಯಾಣಿಕರು ಅಲ್ಲಿ ಬಂದಿಳಿದು ತಮಗೆ ಅಡುಗೆಮಾಡಿ ಹಾಕಬೇಕೆಂದು ಬೇಡು

ತ್ತಿದ್ದರು. ಹಾಗೆ ಮಾಡಿ ಬಡಿಸಿದುದಕ್ಕೆ ಅವರಿಗೂ ಸ್ವಲ್ಪ ಅಕ್ಕಿ ಕಾಯಿ ಮೊದಲಾದುವುಗಳನ್ನು ಕೊಡುತ್ತಿದ್ದರು. ಹೀಗೆ ಒಬ್ಬರಿಗೊಬ್ಬರು ಸಹಾಯಮಾಡುತ್ತಿದ್ದುದರಿಂದ ಈ ಬಡಕುಟುಂಬದ ಜೀವನವು ಸುಖವಾಗಿ ಕಳೆಯುತ್ತಿತ್ತು.

ಸುಬ್ಬು, ಲಚುಮಿಯರಿಗೆ ಇನ್ನಾವ ಚಿಂತೆ ಇಲ್ಲದಿದ್ದರೂ — ಮಕ್ಕಳಿಲ್ಲವಲ್ಲ — ಎಂಬೊಂದು ಚಿಂತೆ ಮಾತ್ರ ಬಲವಾಗಿತ್ತು. ಅವರಿಗೆ ಮಕ್ಕಳಿಲ್ಲವೆಂಬ ಚಿಂತೆ ಅಷ್ಟೇ ಅಲ್ಲ, ಕಂಡವರ ಮಕ್ಕಳನ್ನು ಎತ್ತಿ ಮುದ್ದಾಡಲಿಕ್ಕೂ ಸಾಧ್ಯವಿರಲಿಲ್ಲ. ಕಾರಣ, ಅಲ್ಲಿಂದ ಏಳೆಂಟು ಮೈಲು ದೂರದ ತನಕ ಬೇರೆ ಗುಡಿಸಲುಗಳೂ ಸಹ ಇದ್ದಿರಲಿಲ್ಲ. ಅವರ ಈ ಚಿಂತೆಯನ್ನು ಕಳೆಯಲು ದೇವರು ನಿಶ್ಚಯಿಸಿದಂತೆ ಕಂಡುಬಂದಿತು. ಲಚುಮಿಯು ಗರ್ಭಿಣಿಯಾದಳು. ಒಡನೆಯೇ ಅವಳು ದೇವರಿಗೆ ನೂರಾರು ಹರಕೆ ಹೊತ್ತಳು. ಅಂದಿನಿಂದ ಅವಳ ಸಂತೋಷಕ್ಕೆ ಪಾರವಿರಲಿಲ್ಲ. ಸುಬ್ಬಪ್ಪನ ಬಾಳ್ವೆಗೆ ಒಂದು ಬೆಳಕು ಬಂದಂತಾಯಿತು. ಅದೊಂದು ದಿನ ಲಚುಮಿಯು ಗಂಡು ಕೂಸನ್ನು ಹಡೆದಳು. ಅವರ ಪಾಲಿಗೆ ಇನ್ನೊಬ್ಬ ಸೂರ್ಯನು ಸಿಕ್ಕಿದಷ್ಟು ಸಂತೋಷವಾಯಿತು. ಮನೆಗೆಲಸವಾಯಿತೆಂದರೆ ಲಚುಮಿಗೆ ಮಗುವನ್ನು ಆಡಿಸುವುದೊಂದೇ ಕೆಲಸ. ಈ ಮಗುವಿಗೆ ಅವರು ಅಕ್ಕರೆಯಿಂದ ರಾಯ ಎಂದು ಹೆಸರಿಟ್ಟರು.

ರಾಯನು ಗಟ್ಟಿಮುಟ್ಟಿನ ಮಗು. ಎಂದೂ ಅತ್ತವನಲ್ಲ. ಅವನ ಮುಖವನ್ನು ಕಂಡರೆ ಅಳುವವರೂ ನಗುವರು. ಅಷ್ಟು ಚೆಲುವಿನ, ಅಷ್ಟು ನಗುವಿನ ಮಗುವು ರಾಯ.



ರಾಯನನ್ನು ಅವನ ತಾಯಿಯು ಎತ್ತಿಕೊಂಡು ನದಿ ದಂಡೆಯಲ್ಲಿ ಕುಳಿತುಕೊಳ್ಳುವಳು. ರಾಯನು ನೀರಲ್ಲಿ ತನ್ನ ಬಿಂಬವನ್ನು ಕಂಡು ಕೈ ಬಡಿಯುವನು. ಕೈಯಿಂದ ನೀರನ್ನು ಹೊಡೆಯುವನು. ನೀರು ಮೇಲಕ್ಕೆ ಹಾರಿತೆಂದರೆ ಗಳಗಳನೆ ನಗುವನು. ಮಗುವಿನ ನಗುವನ್ನು ಕಂಡರೆ ತಾಯಿಗೆ ಅಷ್ಟಿಷ್ಟು ಹಿಗ್ಗಲ್ಲ. ಈಗೀಗ ರಾಯನನ್ನು ಎತ್ತಿ ಮುದ್ದಾಡುವವರು ಒಬ್ಬಿಬ್ಬರಲ್ಲ. ಅಲ್ಲಿಗೆ ಬರುವ ದೋಣಿಕಾರರೆಲ್ಲ ಅವನನ್ನು ಎತ್ತಿ ಮುದ್ದಾಡುವವರೇ. ಅವರು ಅವನಿಗೆ ಬೇಕು ಬೇಕಾದ ಸಿಂಗಾರದ ವಸ್ತುಗಳನ್ನು ತಂದುಕೊಡುತ್ತಿದ್ದರು. ಹೀಗೆಯೇ ರಾಯನು ಹಲವರ ಕೈಗೂಸಾಗಿ ಬೆಳೆದನು.

ಒಂದು ಮಳೆಗಾಲ ಬಂದಿತು. ಕೆಲವು ದಿನಗಳಿಂದ ತುಂಬಾ ಮಳೆ ಬೀಳತೊಡಗಿತು. ಸೂರ್ಯನ ಮುಖವೇ

ಕಾಣಿಸದೆ ಒಂದು ವಾರ ಕಳೆಯಿತು. ನದಿನೀರು ರಭಸದಿಂದ ಹರಿಯತೊಡಗಿದುದರಿಂದ ಬಂದು ಹೋಗುವ ದೋಣಿಗಳು ಕಡಿಮೆಯಾದುವು. ಈಗ ಮಳೆಯಂತೆ ಗಾಳಿಯೂ ಬೀಸಲಾರಂಭಿಸಿತು. ಯಾವ ದೋಣಿಕಾರನೂ ನದಿಯಲ್ಲಿ ತನ್ನ ದೋಣಿಯನ್ನು ಒಯ್ಯಲು ಸಾಹಸಮಾಡಲಿಲ್ಲ. ಹೀಗಾಗಿ ಸುಬ್ಬು ಲಚುಮಿಯರು ಉಪವಾಸ ಬೀಳುವಹಾಗಾಯಿತು. ಆದರೆ ಉಪವಾಸಕ್ಕೆ ಅವರು ಅಂಜುವರೇ! ರಾಯನ ಮುಖ ಕಂಡರೆ ಎಂತಹ ಹಸಿವು ಚಿಂತೆಗಳೂ ಮರೆತುಹೋಗುವುವು.

ಮಳೆ ಒಂದೇ ಸಮನೆ ಸುರಿಯತೊಡಗಿ ಒಂಭತ್ತು ದಿನಗಳಾದುವು. ಆದರೂ ನಿಲ್ಲುವ ಚಿಹ್ನೆಯಿಲ್ಲ. ನದಿಯ ನೀರು ಮೇಲೆ ಮೇಲೇರುತ್ತ ಬಂದಿತು. ರಾತ್ರಿ ಸುಬ್ಬುಲಚುಮಿಯರು ರಾಯನನ್ನು ಮಗ್ಗುಲಲ್ಲಿ ಮಲಗಿಸಿಕೊಂಡಿದ್ದರು. ನದಿನೀರು ಮೊರೆಮೊರೆದು ಗುಡಿಯೊಳಕ್ಕೆ ಬಂದಿತು. ಹಸಿವಿನ ಆಯಾಸದಿಂದ ಮಲಗಿದ್ದ ಅವರಿಗೆ, ನೀರು ನುಗ್ಗಿ ಕಾಲನ್ನು ತೊಯ್ದ ಬಳಿಕವೇ, ಎಚ್ಚರವಾಯಿತು. ಗಡಿಬಿಡಿಯಾಯಿತು. ತಾವು ಅಲ್ಲಿ ನಿಂತರೆ ಉಳಿಯಲಾರೆವೆಂದು ತಿಳಿಯಿತು. ಸುಬ್ಬಪ್ಪನು ಹಣತೆಯೊಂದನ್ನು ಹಚ್ಚಿನೋಡಿದನು. ನದಿಯ ರಭಸದ ಘರ್ಜನೆಯು ಕಿವಿ ಒಡೆಯುತ್ತಿತ್ತು. ಗಾಬರಿಯಿಂದ ಎದ್ದನು. ಇನ್ನು ಅಲ್ಲಿ ನಿಲ್ಲಲಾಗದೆಂದು ಮಗುವನ್ನು ಎತ್ತಿ ಹಿಡಿದುಕೊಂಡು ಲಚುಮಿಯೊಡನೆ ಮನೆಬಿಟ್ಟು ಹೊರಗೆ ಬಂದನು. ಅವರ ಕಣ್ಣೆದುರಿಗೇ, ಮನೆಯು ದೊಪ್ಪನೆ ಮುರಿದುಬಿದ್ದು ನೇತ್ರಾವತೀ ತಾಯಿಗೆ ಬಲಿಯಾಯಿತು. ಮೇಲಿಂದ ಜಿರ್ರನೆ ಮಳೆ ಬೀಳುತ್ತಲೇ ಇತ್ತು. ತಾಯಿತಂದೆಗಳ ಮನವು ಕರ

ಗಿತು. ಇಷ್ಟು ಪ್ರೀತಿಯಿಂದ ಸಾಕಿದ ಮಗುವನ್ನು ಆ ಮಳೆಯಲ್ಲಿ, ಕತ್ತಲೆಯಲ್ಲಿ ಎಲ್ಲಿಗೆ ಒಯ್ಯುವುದೆಂದು ತಿಳಿಯದಾಯಿತು. ಆದರೆ ಮಾಡುವುದೇನು? ಅಲ್ಲೇ ನಿಂತಿರಲು ಬಂದೀತೇ? ನದಿ ಇನ್ನೂ ಮೇಲಕ್ಕೇರುತ್ತಿ ಬರುತ್ತಿದೆ. ಉಪಾಯ ಕಾಣದೆ, ಕತ್ತಲಲ್ಲಿ, ನೆನಪಿನ ಮೇಲಿಂದಲೇ ಹೆಜ್ಜೆಹಾಕಿ ಸಾಗಿದರು. ಅವರಿಗಾಗ ಮಗುವಿನ ಯೋಚನೆಯೊಂದಲ್ಲದೆ ಇನ್ನೇನೂ ಇದ್ದಿರಲಿಲ್ಲ.

ಬಲು ದೂರ ಹೋಗಿ ಕಾಡಿನಲ್ಲಿ ಒದ್ದೆ ನೆಲದ ಮೇಲೆ, ಒಂದು ಮರದ ಆಸರೆಯಲ್ಲಿ ನಿಂತುಕೊಂಡರು. ಅಷ್ಟಕ್ಕೆ, ಆಕಾಶದಿಂದ ಮೋಡಗಳು ಸ್ವಲ್ಪ ಸರಿದು ಬೆಳದಿಂಗಳು ಒಂದೆರಡು ಕ್ಷಣ ಅವರು ಕುಳಿತ ಜಾಗವನ್ನು ಬೆಳಗಿತು. ನೋಡುತ್ತಾರೆ ಸುತ್ತಲೂ ದೊಡ್ಡ ಕಾಡು. ಎಲ್ಲೆಲ್ಲೂ ನೀರು ಜಿನುಗುತ್ತಿದೆ. ಲಚುಮಿಯು ರಾಯನ ಮುಖವನ್ನು ಆ ಬೆಳಕಲ್ಲಿ ಕಂಡಳು. ಮೈಯೆಲ್ಲ ತೊಯ್ದು ನಡುಕು ಹುಟ್ಟಿದ್ದರೂ ರಾಯನು ನಗುತ್ತಲೇ ಇದ್ದನು. ಇದ್ದರೆ ಇಂಥ ಮಕ್ಕಳು ಇರಬೇಕೆಂದಳು ಅವಳು!

ಹಾಗೆಯೇ ಮೆಲ್ಲಗೆ ಮೋಡವು ಸರಿಯುತ್ತಬಂದು ಮಳೆಯು ನಿಂತಿತು. ಬೆಳದಿಂಗಳು ಹೆಚ್ಚಿತು. ಆಯಾಸದಿಂದಲೂ, ನಿದ್ರೆಯಿಂದಲೂ ಕಂಗೆಟ್ಟ ತಂದೆತಾಯಿಗಳು ಅಲ್ಲೇ ಒಂದು ಚಿಕ್ಕ ಬಂಡೆಯ ಕಲ್ಲಿನ ಮೇಲೆ ಮಲಗಿಕೊಂಡರು. ಬಳಿಯಲ್ಲಿ ರಾಯನನ್ನು ಮಲಗಿಸಿಕೊಂಡರು. ಕಣ್ಮುಚ್ಚಿದುದೇ ತಡ, ನಿದ್ದೆಹತ್ತಿತು. ರಾಯನಿಗೆ ಚಂದಮಾಮನು ಕಾಣಸಿಕ್ಕಿದರಿಂದ ಅವನು ಮಲಗಲೇ ಇಲ್ಲ. ಅಲ್ಲೇ ಮರವೆಲೆ

ಗಳಿಂದ ಸುರಿಯುವ ನೀರಹನಿಗಳನ್ನೂ, ತಿಂಗಳಬೆಳಕಿಗೆ ಅವು ಥಳಿಸುವುದನ್ನೂ ಕಾಣುತ್ತ ಕುಳಿತನು.

ರಾತ್ರಿ ಕಳೆಯಿತು. ಸೂರ್ಯನು ಹತ್ತು ದಿನಗಳ ಮೇಲೆ ತಿರುಗಿ ದರುಶನಕೊಟ್ಟನು. ಹೊತ್ತು ಮೂಡಿ ಝಾವವಾದರೂ ಅವರಿಗೆ ಎಚ್ಚರವಾಗಲಿಲ್ಲ. ಕೊನೆಗೆ ಸುಬ್ಬಪ್ಪನೆದ್ದು ಕುಳಿತನು. ಅತ್ತಿತ್ತ ಕಂಡನು. ಸೂರ್ಯನನ್ನು ಕಂಡು ಆನಂದವಾಯಿತು. ಲಚುಮಿಯನ್ನು ಎಚ್ಚರಗೊಳಿಸಲು ಕೈ ಚಾಚುತ್ತಾನೆ— ರಾಯನಿಲ್ಲ! ಲಚುಮಿ ಎದ್ದಳು. ಗಾಬರಿಗೊಂಡರವರು. ರಾಯನು ಅಲ್ಲೇ ಆಡುತ್ತಿರಬಹುದೆಂದು ಅತ್ತಿತ್ತ ಹುಡುಕಿದರು. ರಾಯನಿಲ್ಲ! "ರಾಯಾ, ರಾಯಾ!" ಎಂದು ಬೊಬ್ಬಿಟ್ಟರು. ರಾಯನಿಲ್ಲ! ಎಷ್ಟು ಕೂಗಿದರೂ, ಎಷ್ಟು ಹುಡುಕಿದರೂ ಅವರ ರಾಯನಿಲ್ಲ!

## 2. ರಾಯ ಹೋಗಿ ಹುಲಿರಾಯನಾದ.

ಸುಬ್ಬು ಲಚುಮಿಯರಿಗೆ ಕೊನೆಗೂ, ರಾಯನು ಸಿಗಲೇ ಇಲ್ಲ. ಅವನು ಎಲ್ಲಿಗೆ ಹೋದನೆಂದು ತಿಳಿಯಲಾರದೆ ಹೋದರು. ಹುಡುಕಿದುದೂ ವ್ಯರ್ಥವಾಯಿತು; ಅತ್ತುದೂ ವ್ಯರ್ಥವಾಯಿತು. ಚಿಂತೆಯಿಂದ ಅವರು ತಮ್ಮ ಅದೃಷ್ಟವನ್ನು ದೂರಿಕೊಂಡು ಅಲ್ಲಿಂದ ಹೊರಟರು. ತಿರುಗಿ ಅವರು ತಮ್ಮ ಗುಡಿಸಲಿನ ಕಡೆಗೆ ಹೋಗಲಿಲ್ಲ. ಅಂತು, ಮಗನಿಲ್ಲದ ಮೇಲೆ ಮನೆಯೇಕೆಂದು ಅವರು ಅಲ್ಲಿಂದೆದ್ದು ದೇಶಾಟನೆಗೆ ಹೊರಟರು.



ಇತ್ತ ಮೂರು ವರುಷದ ರಾಯನ ಗತಿಯೇನಾಯಿತೆಂದು ಕೇಳುವಿರಾ? ಅವನು ತಿಂಗಳ ಬೆಳಕನ್ನು ಕಾಣುತ್ತ ಆಡುತ್ತಿದ್ದನಷ್ಟೆ. ಆ ಗಳಿಗೆಯಲ್ಲೊಂದು ಹುಲಿಯು ಆಹಾರವನ್ನು ಹುಡುಕಿಬಂದಿತು. ಇಷ್ಟು ದಿನ ಬಲು ಮಳೆಯಾದುದರಿಂದ ಅದು ಉಪವಾಸಬಿದ್ದಿತ್ತು. ಈಗ ಮಳೆ ಬಿಟ್ಟೊಡನೆಯೇ ಹಸಿವನ್ನು ಅಡಗಿಸಲು ಹೊರಬಿದ್ದಿತು. ಅಲ್ಲಲ್ಲಿ ಸಂಚರಿಸುತ್ತಿರುವಾಗ, ಬೆಳದಿಂಗಳಲ್ಲಿ ಆಡುತ್ತಿದ್ದ ರಾಯನು ಕಣ್ಣಿಗೆ ಬಿದ್ದನು. ಹುಲಿಯು ಬಲು ಸಂತೋಷದಿಂದ ಅವನನ್ನು ಕಚ್ಚಿ ಒಯ್ದಿತು. ಬಂದು ಒಯ್ದುದು ಒಂದು ಗಂಡು ಹುಲಿ. ಅದು ರಾಯನನ್ನು ತನ್ನ ಗವಿಯ ಬಳಿ ಕೊಂಡುಹೋಗಿ ಇಳಿಸಿತು. ರಾಯನ ಮುಂದೆ ಗರ್ಜಿಸುವ ಹೆಣ್ಣುಹುಲಿ, ಅದರ ಬಳಿ ಎರಡು ಮರಿಗಳು. ಮರಿಗಳಿಗಾಹಾರವಾಯಿತೆಂದು ಗಂಡುಹುಲಿಯು ಅವನನ್ನು ಇರಿಸಿ ತಿರುಗಿಹೋಯಿತು. ಹೆಣ್ಣುಹುಲಿಯು ಅವನನ್ನು ಹರಿದು ತಿನ್ನಲು ಮುಂದೆ ಬಂದಿತು. ಆದರೆ ರಾಯನಿಗೆ ಅಂಜಿಕೆಯಾಗಲೇ ಇಲ್ಲ. ನಸು ಕತ್ತಲಲ್ಲಿ ಕಾಣಿಸಿದ ಅವುಗಳ ಪಿಳಿಪಿಳಿ ಕಣ್ಣುಗಳ ಚೆಂದವನ್ನು ಕಂಡು

ನಕ್ಕನು. ಅವನ ಬಳಿಗೆ ಹುಲಿಮರಿಗಳು ಓಡಿಬರಲು ಬೆಕ್ಕಿನ ಮರಿಯೆಂದು ತಿಳಿದು ಆಟವಾಡತೊಡಗಿದನು. ಅವುಗಳ ಮೈಸವರಿದನು, ಮುದ್ದಿಟ್ಟನು. ಅವುಗಳೂ ಪ್ರೀತಿಯಿಂದ ಅವನ ಮೈಗೆ ತಮ್ಮ ಮೈಯನ್ನು ಸವರಿ ನಿಂತುವು. ಇದನ್ನು ಕಂಡು ಹೆಣ್ಣುಹುಲಿಯ ಮನಸ್ಸು ಮೃದುವಾಯಿತು.

ಇನ್ನರ್ಧ ತಾಸಿನಲ್ಲಿ ಗಂಡುಹುಲಿಯು ತಿರುಗಿ ಒಂದು ಮೇಕೆಯನ್ನು ಕಚ್ಚಿಕೊಂಡು ಬಂದಿತು. ಅದನ್ನು ಇಳಿಸಿ ನೋಡುತ್ತವೆ - ತನ್ನ ಮರಿಗಳು ಈ ಮಗುವಿನೊಡನೆ ಆಡು ತ್ತಿರುವುದನ್ನು! ಅವೆಲ್ಲ ಆಗ ಆ ಮೇಕೆಯ ಮರಿಯನ್ನು ಹರಿದು ತಿಂದುವು. ತಿಂದಾಗಲು ತಿರುಗಿ ಹುಲಿಯ ಮರಿಗಳು ರಾಯನ ಬಳಿಗೆ ಓಡಿಬಂದುವು. ಇದನ್ನೆಲ್ಲ ಕಂಡು ಹಿರಿ ಹುಲಿಗಳಿಗೆ ರಾಯನ ಮೇಲೆ ಪ್ರೀತಿ ಉಂಟಾಯಿತು. ತಮ್ಮ ಮಕ್ಕಳಿಗಾಡುವುದಕ್ಕಾದರೆ ತಾವು ಅವನನ್ನು ಏಕೆ ಸಾಕ ಬಾರದು ಎಂದು ತಿಳಿದುವು. ಅಂದಿನಿಂದ ರಾಯನು ಹುಲಿ ಮನೆಯಲ್ಲಿ ಬಳೆದನು. ತಂದೆತಾಯಿಗಳಿಲ್ಲದ ಚಿಂತೆಯನ್ನು, ಇವನ್ನು ಕಂಡು ಮರೆತನು. ಅವನನ್ನಿನ್ನು ನಾವು ಹುಲಿ ರಾಯನೆಂದು ಕರೆಯಬೇಡವೆ? ಅವನು ಹುಲಿರಾಯನಾದರೆ, ಹಿರಿ ಗಂಡುಹುಲಿಯು ಹುಲಿಯಪ್ಪನಾಯಿತು; ಹಿರಿ ಹೆಣ್ಣು ಹುಲಿಯು ಹುಲಿಯಮ್ಮನಾಯಿತು.

ದಿನಂಪ್ರತಿ ಅವನೀಗ ಹುಲಿಗಳ ಜತೆಯಲ್ಲಿ ಕೂಡಿ ಆಡು ವನು; ಅವುಗಳು ತಂದುಕೊಟ್ಟುದನ್ನು ತಿನ್ನುವನು. ಅವನ ಮೇಲೆ ಹುಲಿಯಮ್ಮ ಹುಲಿಯಪ್ಪರಿಗೆ ತುಂಬಾ ಪ್ರೀತಿಯುಂ ಟಾಯಿತು. ಅವು ರಾಯನನ್ನು ತಮ್ಮದೇ ಮಗುವೆಂದು

ತಿಳಿಯತೊಡಗಿದುವು. ಎಷ್ಟೋ ಸಾರಿ ಇವನು ಗವಿಯನ್ನು ಬಿಟ್ಟು ಉಳಿದ ಮರಿಗಳೊಡನೆ ಅತ್ತಿತ್ತ ಅಡ್ಡಾಡಲು ಹೊರ ಟರೂ ಹಿರಿಹುಲಿಗಳು ಮಾತನಾಡುತ್ತಿರಲಿಲ್ಲ. ಒಂದು ದಿನ ಹುಲಿರಾಯನು ಹುಲಿಯಪ್ಪನೊಂದಿಗೆ ಸಂಚರಿಸಲು ಹೋಗಿ ದ್ದನು. ಅವರಿಬ್ಬರು ಒಂದು ಚಿಕ್ಕ ಹಳ್ಳದ ಕಡೆಗೆ ಬಂದು ನೀರು ಕುಡಿದರು. ಆಗ ಅವನಿಗೆ ಐದು ವರುಷ ಪ್ರಾಯ ವಾಗಿತ್ತು. ಇವರು ನೀರು ಕುಡಿಯುತ್ತಿರುವಾಗ, ಒಂದು ಚಿಗುರಿಯ ಮರಿಯು ನೀರಿಗಾಗಿ ಅಲ್ಲಿಗೆ ಬಂದಿತು. ಅದು ಇವರನ್ನು ಕಾಣಲಿಲ್ಲ. ಆದರೆ ಹುಲಿರಾಯನು ಕಂಡೊಡ ನೆಯೇ ಅದರ ಚೆಂದಕ್ಕೆ ಮನಸೋತು ಅಲ್ಲಿಗೆ ಓಡತೊಡ ಗಿದನು. ಹುಲಿಯಪ್ಪನೂ ಚಿಗುರಿಯನ್ನು ಕಂಡನು. ಕಂಡೊಡನೆ, ಘರ್ಜಿಸಿ ಅದರ ಮೇಲೆ ಜಿಗಿದು ಕುತ್ತಿಗೆಯನ್ನು ಮುರಿದುಬಿಟ್ಟನು. ಆ ಚಿಗುರಿಯ ಕೂಗು ರಾಯನ ಮನ ಸ್ಸನ್ನು ಕರಗಿಸಿತು. ಇವನನ್ನು ಹುಲಿಯಣ್ಣನು ಊಟಕ್ಕೆ ಬರಹೇಳಿದನು. ಇವನಲ್ಲಿಗೆ ಹೋಗುವಾಗ ಬಡ ಚಿಗು ರಿಯು ಕೈಕಾಲು ಬಡಿಯುತ್ತಿತ್ತು. ಇನ್ನೂ ಉಸಿರಾಟವು ನಿಂತಿರಲಿಲ್ಲ. ಕತ್ತಿನಿಂದ ರಕ್ತವು ಸುರಿಯುತ್ತಿತ್ತು. ಕಣ್ಣು ಗುಡ್ಡೆಗಳು ಹೊರಕ್ಕೆ ಬಂದಿದ್ದುವು. ಹಲ್ಲು ಕಡಿದಿತ್ತು. ಈ ಭೀಕರ ರೂಪವನ್ನು ಕಂಡು ರಾಯನಿಗೆ ವ್ಯಥೆಯಾಯಿತು. ಅವನಿಗಿದುವರೆಗೆ ತಾನು ಈ ರೀತಿ ಕೊಂದ ಮಾಂಸದಿಂದ ಜೀವಿಸುತ್ತಿರುವೆನೆಂದು ತಿಳಿದಿರಲಿಲ್ಲ. ಈಗ ಕಂಡೊಡನೆ ಉಣ್ಣುವ ಮನಸ್ಸಾಗಲಿಲ್ಲ. ಸುಮ್ಮನಾದನು. ಹುಲಿಯಪ್ಪಗೆ ಕಂಡು ಆಶ್ಚರ್ಯವಾಯಿತು. ಒಂದು ವಾರ ಸಂದಿತು —

ಉಳಿದ ಹುಲಿಗಳು ಉಂಡರೆ ಇವನು ಉಪವಾಸ! ರಾಯನು ಹೀಗೇಕೆ ಮಾಡುವನೆಂದು ಮೆಲ್ಲಮೆಲ್ಲಗೆ ಹುಲಿಯಪ್ಪಗೂ, ಹುಲಿಯಮ್ಮಗೂ ಹೊಳೆಯಿತು. ಅವುಗಳು ಅಂದಿನಿಂದ ಹತ್ತಿರದ ಕಾಡಿನಲ್ಲಿ ಬೇಟೆಯಾಡುವುದನ್ನು ಬಿಟ್ಟುವು. ರಾಯನ ಕಣ್ಣಿಗೆ ಬೀಳದಂತೆ ದೂರಹೋಗಿ ಉಂಡು ಬರುತ್ತಿದ್ದುವು. ಈ ಅವಧಿಯಲ್ಲಿ ಅವುಗಳ ಮರಿಗಳು ಬೆಳೆದುದರಿಂದ ಅವು ತಂದೆತಾಯಿಗಳನ್ನು ಬಿಟ್ಟು, ದೂರ ಹೋಗಿ ಬೇರೆ ಮನೆಮಾಡಿ ಕೊಂಡಿದ್ದುವು. ಹೀಗಾಗಿ, ತಮ್ಮನ್ನು ಇನ್ನೂ ಬಿಟ್ಟಿರದ ರಾಯನ ಮೇಲೆ ಆ ಹುಲಿಗಳಿಗೆ ಪ್ರೇಮವು ಬಲವಾಯಿತು; ಇವನೂ ಅವುಗಳನ್ನು ಅಷ್ಟೇ ಪ್ರೀತಿಯಿಂದ ನೋಡುತ್ತಿದ್ದನು. ಅವನೀಗ ಉಪವಾಸವಿರುವುದನ್ನು ಅವು ಕಂಡು ಸಹಿಸ ದಾದುವು. ಅದೇ ಚಿಂತೆಯೇ ಬಲವಾಯಿತು.

ಈಗ ಉಪವಾಸದ ಹತ್ತನೇ ದಿನ. ರಾಯನು ತೀರ ಬಚ್ಚಿಹೋಗಿದ್ದನು. ಉಣ್ಣಲು ಮನವಿಲ್ಲ; ಊಟಮಾಡದೆ ಕಳೆಯದು. ಎದುರಿಗೆ, ಇವನನ್ನು ಮರುಕದಿಂದ ಕಾಣುವ ಹುಲಿಯಪ್ಪ ಹುಲಿಯಮ್ಮಂದಿರು. ಇವನಾಗ ಎಲ್ಲೆಲ್ಲೋ ನೋಡುತ್ತ ಒಂದು ಬೀಳಲನ್ನು ಹಿಡಿದೆಳೆದನು. ಅದರ ಒಂದು ಗಡ್ಡೆಯು ಕಿತ್ತುಬಂದಿತು. ಅದನ್ನು ಎತ್ತಿಹಿಡಿದು ಚೆಂಡಾಡಿದನು. ಉದಾಸೀನತೆಯಿಂದ ಕಚ್ಚಿದನು. ಸಿಹಿ ಯಾಗಿತ್ತು. ತಿಂದೂಬಿಟ್ಟನು. ತಿರುಗಿ ತಿನ್ನುವ ಆಸೆಯಾಯಿತು. ಮತ್ತೊಂದು ಕಿತ್ತುತಿಂದನು. ಅವನ ಹಸಿವು ಅಡಗಿತು. ಮುಖವು ಅರಳಿತು. ಅವನ ಸಂತೋಷವನ್ನು ಕಂಡು ಹಿರಿ ಹುಲಿಗಳಿಗೂ ಆನಂದವಾಯಿತು.



ಅಂದಿನಿಂದ ರಾಯನು ಗೆಡ್ಡೆಗೆಣಸನ್ನು ತಿನ್ನತೊಡಗಿದನು. ಆದರೆ ಹುಲಿಗಳು ಹುಲ್ಲನ್ನು ಮೇಯಬಲ್ಲುವೇ? ಆದರೂ ಅವರ ಪ್ರೇಮವು ಕೆಡಲಿಲ್ಲ. ದಿನ ಕಳೆಯುತ್ತ ಹೋದಂತೆ ರಾಯಗೆ ಗೆಳೆಯರು ಸಿಕ್ಕಿದರು. ಎಷ್ಟೋ ಹರಿಣಗಳು ಅವನ ಜತೆಯಲ್ಲಿ ಆಡತೊಡಗಿದುವು. ಮೊದಲು ಮೊದಲು ಇವನ ಬಳಿ ಹುಲಿಗಳಿರುವುದನ್ನು ಕಂಡು ಅವು ಬರುತ್ತಿರಲಿಲ್ಲ. ಆದರೆ ಆ ಹುಲಿಗಳು ಈಗೀಗ ಆ ಕಾಡಿನಲ್ಲೇ ಬೇಟೆಯಾಡದುದನ್ನು ನೋಡಿ ಅವು ಅವನ ಬಳಿ ಬರಲು ಧೈರ್ಯಮಾಡಿದುವು. ಹೆಚ್ಚೇನು? ಅವನ ಗುಹೆಯ ವರೆಗೂ ಅವು ಬರುತ್ತವೆ. ಹುಲಿಗಳೂ ಅವನಾಟವನ್ನು ಮೌನದಿಂದ ನೋಡುತ್ತವೆ. ಅವುಗಳ ಬೇಟೆಯೆಲ್ಲಾ ದೂರದ ಕಾಡುಗಳಲ್ಲಾಯಿತು. ಈಗೀಗ — ಬೇರೆ ಕಾಡುಗಳ ಹುಲಿಗಳು ಬಂದರೂ ತನ್ನ ಗೆಳೆಯರನ್ನು ರಾಯನು ಕಾಪಾಡುತ್ತಿದ್ದನು. ಹಿರಿ ಹುಲಿಗಳೂ ಸಹಾಯ ಮಾಡುತ್ತಿದ್ದುವು. ಎಲ್ಲವೂ ರಾಯನ ಸಂತೋಷಕ್ಕಾಗಿ.

ಕೆಲವು ವರುಷಗಳೇ ಸಂದುವು. ರಾಯನೀಗ ಬಾಲಕನು ಹೋಗಿ ತರುಣನಾದನು. ಅವನಲ್ಲಿ ಚಟುವಟಿಕೆ ತುಂಬಿದೆ. ಪ್ರೀತಿ ತುಂಬಿದೆ. ಮೈಯಲ್ಲಿ ಮಾಂಸ ತುಂಬಿದೆ. ಯಾರನ್ನೂ ಆಕರ್ಷಿಸುವ ರೂಪ. ವಯಸ್ಸು ಇಪ್ಪತ್ತನಾಲ್ಕು ಆಯಿತು. ಅಷ್ಟರಲ್ಲೇ ಅವನು ಇಡೀ ಕಾಡಿನ ದೊರೆಯಾದನು. ಅಪೂರ್ವಕ್ಕೆ ಕಾಣಸಿಗುವ ಮನುಷ್ಯರನ್ನು ಕಂಡು ಬಟ್ಟೆ ಉಡಲೂ ಕಲಿತನು. ಆದರೆ ಅದು ರೂಢಿಯ ವಸ್ತ್ರವಲ್ಲ. ಸೊಪ್ಪುಗಳವು! ಈಗ ಹುಲಿರಾಯನೆಂಥ ಸುಖಿಯು!

## 3. ವೀರನ ಎದುರು ಬೀರ ನಿಂತ.

ಹುಲಿರಾಯನಿಗೆ ಸ್ನೇಹಿತರೆಂದರೆ ಈಗ ಒಬ್ಬಿಬ್ಬರಲ್ಲ. ಕಾಡಿನಲ್ಲಿರುವ ಹುಲಿಗಳೂ ಅವನ ಗೆಳೆಯರೇ; ಇತರ ಮೃಗ ಗಳೂ ಅವನ ಮಿತ್ರರೇ. ಪಕ್ಷಿಗಳೂ ಸಹ ಅವನ ಪ್ರೀತಿ ಯವುಗಳೇ. ಇಷ್ಟೊಂದು ಜನರ ಜತೆಯಲ್ಲಿ ರಾಯನು ದಿನ ಗಳನ್ನು ಸುಖದಿಂದ ಕಳೆಯುತ್ತಿದ್ದನು. ಯಾವುದಾವದೊಂದು ಪ್ರಾಣಿಗೆ ಇಷ್ಟು ನೋವಾಯಿತೆಂದರೆ ಅವನ ಬಳಿಗೋಡಿ ಬರುವುದು. ಅವನು ಅವುಗಳನ್ನು ಸಮಾಧಾನಪಡಿಸುವನು. ಅವುಗಳ ಮುಖವನ್ನು ಕಂಡೊಡನೆಯೇ ಅವುಗಳಿಗಾವ ಸಂಕಟವು ಉಂಟಾಗಿದೆಯೆಂಬುದು ಅವನಿಗೆ ಗೊತ್ತಾಗುವುದು. ಅವನು ಅದನ್ನು ಹೋಗಲಾಡಿಸಲು ತನ್ನಿಂದಾದ ಸಾಹಸವನ್ನು ಮಾಡುತ್ತಿದ್ದನು. ದಿನೇ ದಿನೇ ಈ ವಿಚಿತ್ರವನ್ನು ಕಂಡ ಹುಲಿ ಯಪ್ಪ ಹುಲಿಯಮ್ಮರು, ಅವನನ್ನು ತಮ್ಮ ಮಗುವೆಂದು

ತಿಳಿಯುವುದನ್ನು ಬಿಟ್ಟು, ಅವನು ತಮ್ಮರಸನೆಂದು ತಿಳಿದರು. ಅವನ ಮನಸ್ಸಿಗೆ ನೋವಾಗುವ ಯಾವುದೇ ಕೆಲಸವನ್ನೂ ಮಾಡುತ್ತಿರಲಿಲ್ಲ.

ಒಂದು ದಿನ ರಾಯನು ಹಲವು ಮೃಗಪಕ್ಷಿಗಳ ಮನೆಗಳನ್ನೆಲ್ಲಾ ತಿರುಗಾಡಿಬಂದು ಆಯಾಸವಾಯಿತೆಂದು ಒಂದು ಮರದ ನೆರಳಿನಲ್ಲಿ ಕುಳಿತಿದ್ದನು. ಆಯಾಸದಿಂದ ಅವನಿಗೆ ತೂಕಡಿಕೆಯಾಯಿತು. ಅಲ್ಲೇ ಮಲಗಿ ನಿದ್ದೆಹೋಗಿಯೂ ಬಿಟ್ಟನು. ಆದರೆ ನಿದ್ರೆ ಏರುವಷ್ಟರಲ್ಲಿ ಏನೋ ಒಂದು ಕೂಗು ಅವನನ್ನು ಎಚ್ಚರಿಸಿತು. ಗಾಬರಿಯಿಂದ ಅತ್ತಿತ್ತ ನೋಡಿದನು. ಏನೂ ಕಾಣಿಸಲಿಲ್ಲ. ಆದರೆ ಒಂದೆರಡು ಕ್ಷಣಗಳಲ್ಲಿ ಒಂದು ಹರಿಣವು ಕೂಗಿಕೊಂಡು ಆ ಕಡೆಗೆ ಓಡಿ ಬಂದಿತು. ಅದರ ಹಿಂದೆಯೇ ಒಬ್ಬ ಬೇಟೆಗಾರನು ಓಡಿ ಬರುತ್ತಿದ್ದನು. ಹರಿಣದ ಕಣ್ಣಿಗೆ ರಾಯನು ಬಿದ್ದೊಡನೆಯೇ ಅದು ಮತ್ತಷ್ಟು ದುಃಖದಿಂದ ಕೂಗುತ್ತ ಅವನೆಡೆಗೆ ಬಂದು ಉರುಳಿತು. ಅವನು ಹರಿಣವನ್ನು ಪ್ರೀತಿಯಿಂದ ಬಿಗಿದಪ್ಪಿದನು. ಅದು ಬಲವಾದ ನಿಟ್ಟುಸಿರನ್ನು ಬಿಡುತ್ತಿತ್ತು. ಅದರ ಕಾಲಿಗೊಂದು ಅಂಬು ನಾಟಿತ್ತು. ರಾಯನು ಅದನ್ನು ಕಿತ್ತು ತೆಗೆದು ರಕ್ತದ ಹರಿದಾಟವನ್ನು ನಿಲ್ಲಿಸಲು ಯತ್ನಿಸುವಷ್ಟರಲ್ಲಿ ಬೇಟೆಗಾರನು ಅವನ ಮುಂದೆ ಬಂದು ನಿಂತನು. ಎಲೆಗಳನ್ನು ತೊಟ್ಟು ನಿಂತ ಈ ವಿಚಿತ್ರ ಮೂರ್ತಿಯನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಹಿಂದೆ ಆ ವನದಲ್ಲಿ ಕಾಡುಜನರು ವಾಸಮಾಡುತ್ತಿದ್ದರೆಂದು ಅವನಿಗೆ ಕೇಳಿದ ನೆನಪಿತ್ತು. ಆದರೆ ಆ ಜನರು ಇನ್ನೂ ಉಳಿದಿರಲಾರರೆಂದೇ ತಿಳಿದಿದ್ದನು. ಇಷ್ಟು

ದೂರ ಬೇಟೆಯೋಡಿಸಿಕೊಂಡು ಬರುವ ಇತರ ಸಂಧಿಗಳು ಅವನಿಗೆ ಈ ವರೆಗೆ ದೊರೆತಿರಲಿಲ್ಲ. ಹೀಗಾಗಿ ರಾಯನನ್ನು ಕಂಡು, ಸ್ವಲ್ಪಸಮಯ ಮಾತನಾಡದೆ ನಿಂತನು. ರಾಯನೂ ಇವನನ್ನು ಕಂಡು ಲಕ್ಷಿಸಲಿಲ್ಲ. ಅವನ ಮನವೆಲ್ಲ, ನೋವಿನಿಂದ ನರಳುತ್ತಿದ್ದ ಆ ಹರಿಣದ ಕಡೆಗಿತ್ತು. ಅವನು ಅದನ್ನು ಉಪಚರಿಸುತ್ತ ಕುಳಿತನು. ಅಷ್ಟರಲ್ಲಿ ಬೇಟೆಗಾರನಿಗೆ ಹರಿಣದ ಯೋಚನೆಯಾಗಿ ಅವನ ಬಳಿಗೆ ಹೋಗಿ, "ಲೋ, ಹರಿಣವನ್ನು ಬಿಟ್ಟುಕೊಡು" ಎಂದು ಮೆಲ್ಲಗೆ ಕೇಳಿದನು. ರಾಯನೂ ಅವನ ಮುಖವನ್ನು ಕಂಡನು. ಅರಣ್ಯಕ್ಕೆ ಬರುವ ಮೊದಲು ಅವನು ಮನುಷ್ಯರ ಒಡನಾಟದಲ್ಲಿದ್ದರೂ ಅದು ಮರವೆಯಾಗಿತ್ತು. ಕಾಡಿಗೆ ಬಂದ ಬಳಿಕ ಒಂದೆರಡು ಬಾರಿ ಮನುಷ್ಯರನ್ನು ಕಂಡಿದ್ದನು. ಅದೂ ದೂರದಲ್ಲಿ. ಈಗ ಸರಿ ಎದುರಿಗೆ ತನ್ನಂತಿರುವ ಮನುಷ್ಯನನ್ನು ಕಂಡು ಅವನಿಗೆ



ಆಶ್ಚರ್ಯವಾಯಿತು. ಅವನನ್ನೇ ಪಿಳಿಪಿಳಿ ಕಂಡನು. ಬೇಟೆಗಾರನು ಎರಡನೇ ಬಾರಿಗೆ ಮೃಗವನ್ನು ಬೇಡಿದನು. ಆದರೆ ಅವನು ಮಾತನಾಡುವುದನ್ನು ಮರೆತು ಇಪ್ಪತ್ತು ವರುಷಗಳೇ ಸಂದಿದ್ದುವು. ಮಾತಿನ ಅರ್ಥವೂ ಹೊಳೆಯಲಿಲ್ಲ. ಮೂರನೆ ಬಾರಿಗೆ ಅವನು ಕೇಳಿದರೂ ಇವನು ಮೌನವಾಗಿಯೇ ಇದ್ದನು. ಆಗ ಬೇಟೆಗಾರನಿಗೆ ಸಿಟ್ಟು ಬಂದಿತು. ಅವನು ಆ ಹರಿಣವನ್ನು ಎಳೆಯಲು ಕೈಚಾಚಿದನು. ರಾಯನೂ ಸಿಟ್ಟಿನಿಂದ ನಿಂತನು. ಆ ಮರಿಯನ್ನು ಬಿಟ್ಟು, ಇವನ ಕೈಗೆ ಕೈಯನ್ನು ಕೊಟ್ಟು ನಿಂತನು. ಬೇಟೆಗಾರನಿಗೆ ಕೋಪವೇರಿತು. ಅವನು ಸಿಟ್ಟಿನಿಂದ ಒಂದೇಟನ್ನು ರಾಯನಿಗೆ ಕೊಟ್ಟನು. ರಾಯನು, ತನ್ನ ಬಲವಾದ ತೋಳುಗಳಿಂದ ಅವನ ರಟ್ಟೆಯನ್ನು ಅಮುಕಿ ಹಿಡಿದು ಅಲುಗಾಡಿಸಿದನು. ಅವನ ಈ ಉಕ್ಕಿನ ಹಿಡಿತಕ್ಕೆ ಬೇಟೆಗಾರನು ಚೀರಿಬಿಟ್ಟನು. ಎಲುಬು ಪುಡಿಯಾಯಿತೋ ಎಂದು ಹೆದರಿದನು. "ಅಯ್ಯೋ!" ಎಂದು ಕೂಗಿದನು. ಹುಲಿರಾಯನಿಗೆ ಪಾಪವೆನಿಸಿತು. ಅವನೊಮ್ಮೆ ಘರ್ಜಿಸಿದನು. ಹುಲಿಗಳೊಡನೆ ಬೆಳೆದವನಾದುದರಿಂದ ಹುಲಿಗಳಂತೆಯೇ ಅವನ ಕೂಗು ಇತ್ತು. ಹಾಗೆ ಅವನನ್ನು ಅಂಜಿಸಿ ಬಿಟ್ಟುಬಿಟ್ಟನು. ಬೇಟೆಗಾರನು ಜೀವದಾಸೆಗಾಗಿ ಅಲ್ಲಿಂದ ಪರಾರಿಯಾದನು. ರಾಯನು ಹರಿಣವನ್ನು ಹಿಡಿದುಕೊಂಡು ತನ್ನ ಗವಿಗೆ ಹೊರಟುಹೋದನು.

ಬೇಟೆಗಾರನ ಕೋಪವು ತಗ್ಗಲಿಲ್ಲ. ಇತ್ತ ಈ ಕಾಡಿನಲ್ಲಿ ಕಾಣಿಸಿದ ಈ ಹುಲಿಕೂಗಿನ ಮನುಷ್ಯನು ಯಾರು — ಎಂದು ತಿಳಿಯುವ ಆಸೆಯಾಯಿತು. ಆದುದರಿಂದ ಅವನು ಸ್ವಲ್ಪ

ಹೊತ್ತಿನಲ್ಲಿ ತನ್ನೊಬ್ಬ ಸಂಗಾತಿಯನ್ನು ಕೂಡಿ ಮರಳಿದನು. ರಾಯನು ಹೊರಟುಹೋದ ದಿಕ್ಕನ್ನು ಕಂಡಿದ್ದನಾದುದರಿಂದ ತಾನೂ ಅದೇ ಹಾದಿಯಾಗಿ ಸಾಗಿದನು. ಬಲುದೂರ ಸಾಗಲು ಅಲ್ಲಲ್ಲಿ ಒಂದೆರಡು ರಕ್ತದ ಹನಿಗಳು ಕಾಣಿಸಿದುವು. ಅದು ನೊಂದ ಜಿಂಕೆಯು ಕಾಲಿನಿಂದ ಒಸರಿದ ರಕ್ತದ ಹನಿಗಳು. ಅದೇ ಸರಿಯಾದ ದಾರಿಯೆಂದು ಮತ್ತೂ ಮುಂದೆ ಸರಿದರು. ಮನುಷ್ಯರ ವಾಸದ ಗುಡಿಗಳು ಒಂದೂ ಅವರ ಕಣ್ಣಿಗೆ ಬೀಳಲಿಲ್ಲ. ಮುಂದೆ ಬೇರೆ ಉಪಾಯಕಾಣದೆ ಎತ್ತರದ ಒಂದು ಮರವನ್ನೇರಿ ಸುತ್ತಲೂ ನೋಡಿದರು. ಅಲ್ಲೇ ತಗ್ಗಿನಲ್ಲಿ ಹುಲಿರಾಯನಿದ್ದನು. ಅವನ ಸುತ್ತ ಹುಲಿಯಪ್ಪ, ಹುಲಿಯಮ್ಮರೂ ಒಂದೆರಡು ಹರಿಣಗಳೂ ಮಲಗಿದ್ದುವು. ಇವನೂ ಹುಲಿಯಪ್ಪನ ಮೈಗೆ ತಲೆಕೊಟ್ಟು ನಿದ್ರೆಹೋಗಿದ್ದನು. ಇದನ್ನು ಕಂಡು ವಿಚಿತ್ರವೆನಿಸಿತು. ಅತಿಯಾದ ಭೀತಿಯಾಯಿತು. ಇಬ್ಬರೂ ಒಂದೇ ಸವನೆ ಓಟಓಡಿದರು. ಅವರ ಊರಿಗೂ ಈ ಸ್ಥಳಕ್ಕೂ ಬಲು ದೂರವಿತ್ತು. ಅಂತು ಕತ್ತಲೆಯಾದ ಸ್ವಲ್ಪಹೊತ್ತಿಗೆ ಊರನ್ನು ಸೇರಿದರು. ಅಲ್ಲಿ ಬೇಟೆಗಾರನ ಹೆಂಡತಿಯು ಗಂಡನು ಏನಾದರೂ ಬೇಟೆತರುವನೆಂದು ಕಾದುಕುಳಿತಿದ್ದಳು. ಬರಿಗೈಯಿಂದ ಬಂದ ಇವನನ್ನೂ ಇವನ ಸ್ನೇಹಿತನನ್ನೂ ಕಂಡು ಅವಳಿಗೆ ಆಶ್ಚರ್ಯವಾಯಿತು. ಅವನಂಥ ಬೇಟೆಗಾರನು ಆ ಊರಲ್ಲಿದ್ದಿಲ್ಲವಂತೆ. ಒಂದು ದಿನವಾದರೂ ಅವನು ಬೇಟೆಗೆ ಹೋಗಿ ಬರಿಗೈ ಬಂದವನಲ್ಲ. "ಇಂದೇನು ಸಂಗತಿ?" ಎಂದು ತನ್ನ ಗಂಡನನ್ನು ವಿಚಾರಿಸಿದಳು. ಅವನು ಎಲ್ಲವನ್ನು ವಿವರಿಸಿ ಹೇಳಿದನು. ಅವಳು

ನಂಬಲಾರದೆ ನಕ್ಕಳು. ಸ್ನೇಹಿತನು ತಾನು ಕಂಡುದನ್ನು ಹೇಳಿದನು. ಆದರೂ ನಂಬಿಕೆ ಹುಟ್ಟಲಿಲ್ಲ. “ಹುಲಿಯ ಮೈ ಮೇಲೆ ಒರಗಿ ನಿದ್ರೆಮಾಡುವ ಮನುಷ್ಯನೇ? ಹುಲಿಯೂ ಹರಿಣವೂ ಒಟ್ಟಿಗಿರುವ ಸ್ಥಳವೇ? . . . . . ಸುಳ್ಳು ಸುಳ್ಳು” ಎಂದಳು. ಬೇಟೆಗಾರನು ಹಿಚುಕಿ ನುಗ್ಗಾದ ತನ್ನ ತೋಳನ್ನು ತೋರಿಸಿದನು. ಅದರ ನೋವಿನಿಂದ ಅವನು ಕಂಗಾಲಾಗಿದ್ದನು. ಇದನ್ನು ಕಂಡಬಳಿಕ ಅವಳಿಗೆ “ಇದೇನೋ ಸೋಜಿಗ” ವೆಂದು ತೋರಿತು. ಅದರ ನಿಜವನ್ನು ತಿಳಿಯಲೇಬೇಕೆಂದು ಅವಳಿಗೂ ಆಸೆಯಾಯಿತು. ಅಂತು ಅಂಥ ಒಬ್ಬ ವಿಚಿತ್ರ ಮನುಷ್ಯನು ತಮ್ಮೂರಿಗೆ ಇಷ್ಟು ಸಮೀಪದಲ್ಲಿರುವುದಾದರೆ ತಮ್ಮ ನಾಯಕರಿಗೆ ತಿಳಿಸದಿರಬಾರದೆಂದು ಅವಳು ಸೂಚಿಸಿದಳು. ಇವರಿಗೂ ಇದು ಅಹುದೆಂದು ಕಂಡಿತು. ಅವರ ನಾಯಕನ ಹೆಸರು ಬೀರನೆಂದು. ಬೀರನು ಆ ಕಾಡುಪ್ರಾಂತಕ್ಕೆಲ್ಲಾ ದೊರೆ. ಬಿಲ್ಲಾಳುಗಳಿಗೆಲ್ಲ ಅವನು ಗುರು. ಸುದ್ದಿ ಅವನ ಕಿವಿಗೆ ಮುಟ್ಟಿದರೆ ಈ ಹುಲಿರಾಯನ ದಂಡನೆಯಾದೀತೆಂದು ನಂಬಿ ಮರುದಿನವೇ ಅಲ್ಲಿಗೋಡಿದರು. ಅವನೂ ಇವರನ್ನು ನಂಬಲಿಲ್ಲ. ಆದರೆ ತನ್ನ ಬಳಿ ಇವರು ಸುಳ್ಳಾಡರೆಂದು ಒಂದು ಬೇಟೆಯ ನೆವದಿಂದ ಹುಲಿರಾಯನ ಕಾಡಿಗೆ ತನ್ನ ಜನರನ್ನು ಕೂಡಿಕೊಂಡು ಹೋಗುವ ನಿಶ್ಚಯಮಾಡಿದನು.

## 4. ಹಿಗ್ಗಿಹೋಗಿ, ಬಗ್ಗಿಬಂದರು.

ಬೀರನ ತಿಯಾರಿಯು ಸಿದ್ಧತೆಯಾಯಿತು. ಹತ್ತೈವತ್ತು ಜನ ಕುಶಲ ಬಿಲ್ಲಾಳುಗಳನ್ನೂ, ಈಟಿಯವರನ್ನೂ ಹಿಡಿದು ಕೊಂಡು ಕಾಡಿಗೆ ಹೊರಟರು. ಇದುವರೆಗೂ ಕಾಣದಂಥ ಉತ್ಸಾಹವು ಅವರಲ್ಲಿ ಕಂಡುಬಂದಿತು. ಹುಲಿರಾಯನ ಬೇಟೆಗೆ ಅವರು ಹೊರಟವರಲ್ಲವೇ! ಈ ಸುದ್ದಿಯು ಬೀರನ ಮಗಳಿಗೆ ತಿಳಿದುಬಂದಿತು. ಅವಳಿಗೂ ಶಿಕಾರಿ ಎಂದರೆ ಇಷ್ಟ. ಇತ್ತ ಈ ವಿಚಿತ್ರ ಮನುಷ್ಯನ ಕಥೆ ಕೇಳಿ ತಾನೂ ಬರಬೇಕೆಂಬ ಆಸೆ ಆಯಿತು. ತಂದೆಯನ್ನು ಕೇಳಿದಳು. ಆದರೆ ಬೀರನು ಮೊದಲಿಗೇ ಒಪ್ಪಿಗೆಯನ್ನು ಕೊಡಲಿಲ್ಲ. ಇಂದಿನ ಬೇಟೆಯು ಬಲು ಕಠಿಣವ್ದೆಂಬುದರಿಂದ ಅವನು ತನ್ನ ಒಬ್ಬಳೇ ಮಗಳಾದ ಹೇಮೆಯನ್ನು ಜತೆಯಲ್ಲಿ ಒಯ್ಯಲು ಇಚ್ಛೆಪಡ ಲಿಲ್ಲ. ಆದರೆ ಹೇಮೆಯು ಹಟಗಾರ್ತಿ. ಒಮ್ಮೆ ಛಲ ಹಿಡಿ ದರೆ ಬಿಡುವವಳಲ್ಲ. ಅದನ್ನು ಕಂಡು ಬೀರನ ನಿಶ್ಚಯವು ಬದಲಾಯಿತು. ಮಗಳೂ ಬೇಟೆಗೆ ಬರುವುದೆಂತಾಯಿತು. ಕುದುರೆಗಳನ್ನೇರಿ ಬೀರನ ಬಿಲ್ಲಾಳುಗಳು ಹೊರಟರು. ಹೇಮೆಯೂ ಕುದುರೆಯೇರಿದಳು. ಅವಳ ರಕ್ಷಣೆಗೆಂದು ನಾಲ್ಕು ಜನ ಬಿಲ್ಲಾಳುಗಳು ಬೇರೆ ನಿಂತರು. ಕಹಳೆಕೊಂಬು ಗಳನ್ನೂದುತ್ತ ಬೇಟೆಗಾರರ ಪಡೆಯು ಕಾಡನ್ನು ಹೊಗ್ಗಿತು.

ದಾರಿಯುದ್ದಕ್ಕೂ ಈ ಪಡೆಯನ್ನು ಕಂಡು, ಇವರ ಕೂಗನ್ನು ಕೇಳಿ, ಮೃಗಪಕ್ಷಿಗಳು ಚಲ್ಲಾಬಿಲ್ಲಿಯಾಗಿ ಚದರಿ ದವು. ಅವರು ಹಾಗೆಯೇ ಬಲುದೂರ ಸಾಗಿದರು. ಇನ್ನೂ

ರಾಯನ ಕಾಡು ಬರಲಿಲ್ಲ. ಬೀರನ ರಾಜ್ಯದ ಗಡಿಯನ್ನೂ ದಾಟಿದುದಾಯಿತು. ತನ್ನ ಗೆಳೆಯನು ತಂದ ಸುದ್ದಿಯು ಸುಳ್ಳಿರಬೇಕೆಂಬ ಸಂಶಯವೂ ಉಂಟಾಯಿತು. ಅದು ಸುಳ್ಳು ಸುದ್ದಿಯೇ ಆದರೆ ಅವನ ತಲೆಯನ್ನು ಕಡಿಯಬೇಕೆಂದು ನಿಶ್ಚಯವಾಗಿತ್ತು. ಅಲ್ಲದೆ, ಅವರಲ್ಲಿ ಒಂದು ಪದ್ಧತಿ ಯಿತ್ತು. ಬೇಟೆಗೆ ಹೋದವರು ಮನೆಗೆ ಬರಿಗೈ ಬರಲೇ ಬಾರದು ಎಂದು. ಪ್ರಾಯಶಃ ಇವರಿಬ್ಬರು ಬರಿಗೈ ಬಂದು ದಕ್ಕೊಂದು ನೆಪ ಹುಡುಕಿರಬೇಕೆಂಬ ಸಂಶಯವಾಯಿತು. ಹಾಗಿದ್ದರೆ ಆ ಇಬ್ಬರು ಸುದ್ದಿಕಾರರ ಗತಿಯು ಕೆಟ್ಟಿತೆಂದೇ ತಿಳಿಯಬೇಕು.

ಸರಿ. ಅವರೆಷ್ಟು ಹಾದಿ ಸಾಗಿದರೂ ಕಾಡು ಮುಗಿಯ ಲಿಲ್ಲ. ಇನ್ನೂ ದಟ್ಟವಾಗುತ್ತ ಬಂತು. ಮುಂದೆ ಮುಂದೆ, ಕುದುರೆಗಳು ನುಸುಳುವುದಲ್ಲಿರಲಿ, ಮನುಷ್ಯರು ಪ್ರವೇಶಿಸು ವುದೇ ಕಠಿಣವೆಂಬಂತೆ ಕಂಡಿತು. ಅವರೆಲ್ಲಾ ಕುದುರೆ ಗಳಿಂದಿಳಿದರು. ಹೇಮೆಯೂ ಇಳಿದಳು. ಬೀರನು, ಅವಳು ಮುಂದೆ ಬರಬಾರದೆಂದೂ, ಅಲ್ಲೇ ತನ್ನ ರಕ್ಷಕರೊಡನೆ ಕಾದಿರ ಬೇಕೆಂದೂ ಹೇಳಿದನು. ಆದರೆ ಹೇಮೆಯು ಒಪ್ಪುವಳೇ? “ಇಲ್ಲಿಯ ತನಕ ಬಂದು, ತಾನು ಮಾತ್ರ ಆ ವಿಚಿತ್ರ ಹುಲಿ ರಾಯನನ್ನು ಕಾಣಬಾರದೇ?” ಎಂದು ಕೇಳಿದಳು. ಇಲ್ಲೂ ಅವಳ ಹಟವೇ ಮಿಗಿಲೆನಿಸಿ ತಿರುಗಿ ಅವರು ಅವಳನ್ನು ಕೂಡಿ ಮುಂದರಿದರು. ಹಿಂದಿನ ದಿನ ಬೇಟೆಗಾರಗೂ ರಾಯಗೂ ಜಗಳವಾದ ಸ್ಥಳವು ಬಂದಿತು. ಅವನು ಬೀರನಿಗೆ ಅದನ್ನು ತೋರಿಸಿದನು. ಆದರೆ ನಂಬುವವರಾರು? ಎಲ್ಲರೂ ಸತ್ಯ

ಕಡೆಗೋಡಿದನು. ಅವರಲ್ಲಿ ಏನು ಮಾತುಕಥೆಯಾಯಿತೋ ತಿಳಿಯದು. ರಾಯನು ಹುಲಿಯನ್ನೇರಿದನು. ಅವರು ವೇಗ ದಿಂದ ಸಾಗಿದರು. ಹೇಮೆಯು ನಿಂತಲ್ಲೇ! ಅವಳಿಗೆ ಇದೆಲ್ಲ ವಿಚಿತ್ರವೆನಿಸಿತು. ಹುಲಿರಾಯನು ಇರುವುದು ನಿಜವೆಂದೂ ತನಗೆ ಭೇಟಿಯಾದವನು ಅವನೇ ಎಂದೂ ಅವಳು ನಿಶ್ಚಯ ಮಾಡಿಬಿಟ್ಟಳು. ಆವನು ಕಣ್ಮರೆಯಾದುದಕ್ಕೆ ಅವಳು ವ್ಯಥೆ ಗೊಂಡಳು. ಅವಳ ಕಣ್ಣಿಂದ ನೀರಹನಿಗಳು ಸುರಿದು ನದಿ ಯಲ್ಲಿ ಒಂದಾಗಿ ಹೋದುವು.

ಇತ್ತ ಬೇಟೆ ಮುಂದರಿಸಿ ಹೋದವರ ಸುದ್ದಿ ಹೇಳುತ್ತೇನೆ. ಆವರು ಬಲುದೂರ ಮುಂದರಿದ ಬಳಿಕ ರಾಯನ ಗವಿಯ ಜಾಗವನ್ನು ಸೇರಿದರು. ಅಲ್ಲಿ ಯಾರೂ ಇದ್ದಿರಲಿಲ್ಲ. ಬೀರ ನಿಗೆ ಕೋಪಬಂದಿತು. ಇವನು ತಮ್ಮನ್ನು ಮೋಸಮಾಡುವು ದಕ್ಕಾಗಿ ಅಲ್ಲಿಯ ತನಕ ಕರೆದುತಂದನೆಂದು ತಿಳಿದನು. ಆ ಗೆಳೆಯನಿಗೂ ಅಂಜಿಕೆಯಾಯಿತು. ತನ್ನ ದುರ್ದೈವಕ್ಕೆ ಸರಿ ಯಾಗಿ ಬಂದ ಕಾರ್ಯವೂ ಸಫಲವಾಗದೆ ಹೋದರೆ ಖಂಡಿತ ವಾಗಿಯೂ ತನ್ನ ಪ್ರಾಣವೇ ಉಳಿಯುವ ಬಗೆಯಿಲ್ಲವೆಂದು ತಿಳಿದಿತ್ತು. ಆದುದರಿಂದವನು ಒಂದು ಮರವನ್ನು ಏರಿದನು. ದೂರದಲ್ಲಿ, ಇನ್ನೊಂದು ಸ್ಥಳದಲ್ಲಿ ಹುಲಿ ಹರಿಣಗಳು ಕೂಡಿ ಆಡುತ್ತಿದ್ದುವು. ಆದರೆ ರಾಯನಿರಲಿಲ್ಲ. ಅವಸರದಿಂದಿಳಿದು ಸುದ್ದಿಯನ್ನು ಬೀರನಿಗೆ ತಿಳಿಸಿದನು. ಎಲ್ಲರೂ ತುಂಬ ಆಯಾಸಪಟ್ಟಿದ್ದರಾದರೂ ಸದ್ದಿಲ್ಲದೆ ಆ ಸ್ಥಳಕ್ಕೆ ಮುಂದರಿ ದರು. ದಟ್ಟವಾದ ಪೊದೆಗಳ ಎಡೆಯಲ್ಲಿ ನುಗ್ಗಿ ಮುಂದರಿ ದರು. ದೂರದಲ್ಲಿ ನಡೆಯುತ್ತಿದ್ದ ವಿಚಿತ್ರವು ಎಲ್ಲರಿಗೂ

ಕಾಣಿಸಿತು. ನಾಲ್ಕಾರು ಹುಲಿಗಳು, ಹತ್ತೆಂಟು ಹರಿಣಗಳು ಜತೆಯಲ್ಲಿ ಆಟವಾಡುತ್ತಿದ್ದುವು. ಬೀರನಿಗೆ ತನ್ನ ಕಣ್ಣನ್ನು ನಂಬಲು ಆಗಲಿಲ್ಲ. ಅದೇ ಹುಲಿರಾಯನಿರುವ ಸ್ಥಳವೆಂದು ನಿಶ್ಚಯಿಸಿದನು. ಆದರೆ ಅಲ್ಲಿಯ ತನಕ ಬಂದು ಬರೇ ಸ್ಥಳ ವನ್ನು ಕಂಡು ಉಪಯೋಗವಿಲ್ಲವೆಂದೂ ತಿಳಿದನು. ಬೀರನು ಕಲ್ಲೆದೆಯವನು. ಇಂಥ ಸ್ಥಳವನ್ನು ಕಂಡು ಅವನಿಗೆ ಇಷ್ಟೂ ಅಂಜಿಕೆಯಾಗಲಿಲ್ಲ. ಅವನ ಅಪ್ಪಣೆಯ ಮೇರೆ ೪೦-೫೦ ಬಿಲ್ಲಾಳುಗಳು ಒಂದೇ ಬಾರಿಗೆ ಕಹಳೆ ಕೊಂಬುಗಳನ್ನೂದಿದರು. ಆಕಾಶವನ್ನು ಒಡೆಯುವ ಕೂಗು ಹೊರಟಿತು. ಆಡುತ್ತಿದ್ದ ಮೃಗಗಳು ದಿಕ್ಕಾಪಾಲಾಗಿ ಚೆದರಿದುವು. ಹುಲಿಗಳೂ ಅಲ್ಲಿ ನಿಲ್ಲಲಿಲ್ಲ. ಬೀರನ ಮನಸ್ಸಿನಲ್ಲಿ, ಈ ಮೃಗಗಳನ್ನು ಕೆಣಕಿ ದುದರಿಂದ ಹುಲಿರಾಯನು ಖಂಡಿತವಾಗಿಯೂ ಬರಬಹು ದೆಂದು ಇತ್ತು. ಆದರೆ ಎಷ್ಟು ಕಾದರೂ ಯಾರೂ ಇಲ್ಲವಾ ಯಿತು. ನಿರಾಶೆಗೊಂಡನು. ಇತ್ತ ಹೇಮೆಯ ನೆನಪಾಗಲು, ತಾವು ಇಷ್ಟು ಹೊತ್ತು ಅಲ್ಲಿ ನಿಂತುದು ಸರಿಯಲ್ಲವೆಂದು ಮರಳಿದರು.

ಹೇಮೆಯ ರಕ್ಷಕರು, ಕೂಗನ್ನು ಕೇಳಿ ಓಡಿದರಷ್ಟೆ! ಬಲು ಹೊತ್ತಿನ ಮೇಲೆ ಮರಳಿಬಂದರೆ, ಅವಳಿನ್ನೂ ನೀರಲ್ಲೇ ನಿಂತಿದ್ದಳು. ತಿರುಗಿ ಅವರು ದೂರಸರಿದು ನಿಂತರು. ಅವಳಿ ಗೇನಾದರೂ ಅಪಾಯವು ಬಂದಿದ್ದರೆ ಅವರ ಪ್ರಾಣಕ್ಕೆ ಸಂಚು ಗಾರ ಬರುತ್ತಿತ್ತು. ತಾಸುಹೊತ್ತಿನಲ್ಲಿ ಬೀರನ ಪರಿವಾರವು ಬಂದಿತು. ಬೀರನು "ಹೇಮೆಯೆಲ್ಲಿ?" ಎಂದು ಕೇಳಿದನು. ಆಗಿನಿಂದಲೂ ಸ್ನಾನಮಾಡುತ್ತಿದ್ದಾಳೆ ಎಂದುತ್ತರ ಬಂದಿತು.

ಕಡೆಗೋಡಿದನು. ಅವರಲ್ಲಿ ಏನು ಮಾತುಕಥೆಯಾಯಿತೋ ತಿಳಿಯದು. ರಾಯನು ಹುಲಿಯನ್ನೇರಿದನು. ಅವರು ವೇಗ ದಿಂದ ಸಾಗಿದರು. ಹೇಮೆಯು ನಿಂತಲ್ಲೇ! ಅವಳಿಗೆ ಇದೆಲ್ಲ ವಿಚಿತ್ರವೆನಿಸಿತು. ಹುಲಿರಾಯನು ಇರುವುದು ನಿಜವೆಂದೂ ತನಗೆ ಭೇಟಿಯಾದವನು ಅವನೇ ಎಂದೂ ಅವಳು ನಿಶ್ಚಯ ಮಾಡಿಬಿಟ್ಟಳು. ಆವನು ಕಣ್ಮರೆಯಾದುದಕ್ಕೆ ಅವಳು ವ್ಯಥೆ ಗೊಂಡಳು. ಅವಳ ಕಣ್ಣಿಂದ ನೀರಹನಿಗಳು ಸುರಿದು ನದಿ ಯಲ್ಲಿ ಒಂದಾಗಿ ಹೋದುವು.

ಇತ್ತ ಬೇಟೆ ಮುಂದರಿಸಿ ಹೋದವರ ಸುದ್ದಿ ಹೇಳುತ್ತೇನೆ. ಅವರು ಬಲುದೂರ ಮುಂದರಿದ ಬಳಿಕ ರಾಯನ ಗವಿಯ ಜಾಗವನ್ನು ಸೇರಿದರು. ಅಲ್ಲಿ ಯಾರೂ ಇದ್ದಿರಲಿಲ್ಲ. ಬೀರ ನಿಗೆ ಕೋಪಬಂದಿತು. ಇವನು ತಮ್ಮನ್ನು ಮೋಸಮಾಡುವು ದಕ್ಕಾಗಿ ಅಲ್ಲಿಯ ತನಕ ಕರೆದುತಂದನೆಂದು ತಿಳಿದನು. ಆ ಗೆಳೆಯನಿಗೂ ಅಂಜಿಕೆಯಾಯಿತು. ತನ್ನ ದುರ್ದೈವಕ್ಕೆ ಸರಿ ಯಾಗಿ ಬಂದ ಕಾರ್ಯವೂ ಸಫಲವಾಗದೆ ಹೋದರೆ ಖಂಡಿತ ವಾಗಿಯೂ ತನ್ನ ಪ್ರಾಣವೇ ಉಳಿಯುವ ಬಗೆಯಿಲ್ಲವೆಂದು ತಿಳಿದಿತ್ತು. ಆದುದರಿಂದವನು ಒಂದು ಮರವನ್ನು ಏರಿದನು. ದೂರದಲ್ಲಿ, ಇನ್ನೊಂದು ಸ್ಥಳದಲ್ಲಿ ಹುಲಿ ಹರಿಣಗಳು ಕೂಡಿ ಆಡುತ್ತಿದ್ದುವು. ಆದರೆ ರಾಯನಿರಲಿಲ್ಲ. ಅವಸರದಿಂದಿಳಿದು ಸುದ್ದಿಯನ್ನು ಬೀರನಿಗೆ ತಿಳಿಸಿದನು. ಎಲ್ಲರೂ ತುಂಬ ಆಯಾಸಪಟ್ಟಿದ್ದರಾದರೂ ಸದ್ದಿಲ್ಲದೆ ಆ ಸ್ಥಳಕ್ಕೆ ಮುಂದರಿ ದರು. ದಟ್ಟವಾದ ಪೊದೆಗಳ ಎಡೆಯಲ್ಲಿ ನುಗ್ಗಿ ಮುಂದರಿ ದರು. ದೂರದಲ್ಲಿ ನಡೆಯುತ್ತಿದ್ದ ವಿಚಿತ್ರವು ಎಲ್ಲರಿಗೂ

ಕಾಣಿಸಿತು. ನಾಲ್ಕಾರು ಹುಲಿಗಳು, ಹತ್ತೆಂಟು ಹರಿಣಗಳು ಜತೆಯಲ್ಲಿ ಆಟವಾಡುತ್ತಿದ್ದುವು. ಬೀರನಿಗೆ ತನ್ನ ಕಣ್ಣನ್ನು ನಂಬಲು ಆಗಲಿಲ್ಲ. ಅದೇ ಹುಲಿರಾಯನಿರುವ ಸ್ಥಳವೆಂದು ನಿಶ್ಚಯಿಸಿದನು. ಆದರೆ ಅಲ್ಲಿಯ ತನಕ ಬಂದು ಬರೇ ಸ್ಥಳ ವನ್ನು ಕಂಡು ಉಪಯೋಗವಿಲ್ಲವೆಂದೂ ತಿಳಿದನು. ಬೀರನು ಕಲ್ಲೆದೆಯವನು. ಇಂಥ ಸ್ಥಳವನ್ನು ಕಂಡು ಅವನಿಗೆ ಇಷ್ಟೂ ಅಂಜಿಕೆಯಾಗಲಿಲ್ಲ. ಅವನ ಅಪ್ಪಣೆಯ ಮೇರೆ ೪೦-೫೦ ಬಿಲ್ಲಾಳುಗಳು ಒಂದೇ ಬಾರಿಗೆ ಕಹಳೆ ಕೊಂಬುಗಳನ್ನೂದಿದರು. ಆಕಾಶವನ್ನು ಒಡೆಯುವ ಕೂಗು ಹೊರಟಿತು. ಆಡುತ್ತಿದ್ದ ಮೃಗಗಳು ದಿಕ್ಕಾಪಾಲಾಗಿ ಚೆದರಿದುವು. ಹುಲಿಗಳೂ ಅಲ್ಲಿ ನಿಲ್ಲಲಿಲ್ಲ. ಬೀರನ ಮನಸ್ಸಿನಲ್ಲಿ, ಈ ಮೃಗಗಳನ್ನು ಕೆಣಕಿ ದುದರಿಂದ ಹುಲಿರಾಯನು ಖಂಡಿತವಾಗಿಯೂ ಬರಬಹು ದೆಂದು ಇತ್ತು. ಆದರೆ ಎಷ್ಟು ಕಾದರೂ ಯಾರೂ ಇಲ್ಲವಾ ಯಿತು. ನಿರಾಶೆಗೊಂಡನು. ಇತ್ತ ಹೇಮೆಯ ನೆನಪಾಗಲು, ತಾವು ಇಷ್ಟು ಹೊತ್ತು ಅಲ್ಲಿ ನಿಂತುದು ಸರಿಯಲ್ಲವೆಂದು ಮರಳಿದರು.

ಹೇಮೆಯ ರಕ್ಷಕರು, ಕೂಗನ್ನು ಕೇಳಿ ಓಡಿದರಷ್ಟೆ! ಬಲು ಹೊತ್ತಿನ ಮೇಲೆ ಮರಳಿಬಂದರೆ, ಅವಳಿನ್ನೂ ನೀರಲ್ಲೇ ನಿಂತಿದ್ದಳು. ತಿರುಗಿ ಅವರು ದೂರಸರಿದು ನಿಂತರು. ಅವಳಿ ಗೇನಾದರೂ ಅಪಾಯವು ಬಂದಿದ್ದರೆ ಅವರ ಪ್ರಾಣಕ್ಕೆ ಸಂಚು ಗಾರ ಬರುತ್ತಿತ್ತು. ತಾಸುಹೊತ್ತಿನಲ್ಲಿ ಬೀರನ ಪರಿವಾರವು ಬಂದಿತು. ಬೀರನು “ಹೇಮೆಯೆಲ್ಲಿ?” ಎಂದು ಕೇಳಿದನು. ಆಗಿನಿಂದಲೂ ಸ್ನಾನಮಾಡುತ್ತಿದ್ದಾಳೆ ಎಂದುತ್ತರ ಬಂದಿತು.

ಬೀರನಿಗೆ ಆಶ್ಚರ್ಯವಾಯಿತು. ಅವನೊಬ್ಬನೇ ನದಿಗೆ ಮುಂದರಿದನು. ಹೇಮೆಯು ಆಗ ನಿಂತಂತೆಯೇ ನಿಂತಿದ್ದಳು. ಅವಳು ಆಶ್ಚರ್ಯ, ವ್ಯಥೆಗಳಿಂದ ಕಲ್ಲಾಗಿದ್ದಳು! ಬೀರನು ಮಗಳನ್ನು ಕಂಡು ಚಕಿತನಾದನು. ಏನೆಂದು ಕೇಳಿದನು. ಅವಳು ಉತ್ತರಕೊಡಲಿಲ್ಲ. ಇವನಿಗೂ ದಾರಿಕಾಣದೆ ಮಗಳನ್ನು ಕರೆದುಕೊಂಡು ಪಾಳೆಯಕ್ಕೆ ಬಂದನು. ತನ್ನ ಪರಿವಾರದವರಿಗೆ, ಬಂದುದಕ್ಕೆ ಒಂದೆರಡು ಹರಿಣಗಳನ್ನಾದರೂ ಬೇಟೆಯಾಡಿಬರುವಂತೆ ಅಪ್ಪಣೆಯಿತ್ತು ಮಗಳೊಡನೆ ಮರಳಿದನು. ಬೇಟೆಯುವರು ಮರಳುವಾಗ ನಡುರಾತ್ರಿಯಾಗಿತ್ತು.

ಅಂತು ಹೇಮೆಯು ಮನೆಗೆ ಬಂದಳು. ಬಂದರೂ ಮಾತನಾಡಲಿಲ್ಲ. ಒಂದೇಸವನೆ ಅಳುತ್ತಿದ್ದಳು. ರಾತ್ರಿಯು ಜ್ವರದಿಂದ ಮೆಲ್ಲಗೆ ಕುದಿಯತೊಡಗಿತು. ಮಗಳಿಗೆ ತೊಡಗಿದ ಈ ಹೊಸ ಕಾಯಿಲೆಯನ್ನು ಕಂಡು ಬೀರನು ಚಿಂತೆಗೊಳಗಾದನು!

## 5. ನಾಡಿನ ಹುಡುಗಿಗೆ ಕಾಡಿನ ಗಂಡ.

ಹೇಮೆಯು ಹಾಸುಗೆಯನ್ನು ಹಿಡಿದಳು. ಯಾರು ಬಂದರೂ ಮಾತನಾಡುವುದಿಲ್ಲ. ಯಾವಾಗಲೂ ಮೋರೆ ತಗ್ಗಿಸಿಕೊಂಡು ಕುಳಿತಿರುವುದು ಒಂದೇ ಕೆಲಸ. ಬೀರನಿಗೆ ಗಾಬರಿಯಾಯಿತು. ಅವನಿಗೆ ಇದ್ದುದೊಬ್ಬಳೇ ಮಗಳು. ಅದೂ ಅವಳೆಂದರೆ ಅವನ ಜೀವ. ಮಗಳ ಬಳಿಗೆ ಬಂದು ಕಾರಣವನ್ನು ಕೇಳಿದನು. ಆದರೆ ಅವಳು ಸೊಲ್ಲುಬಿಡಲಿಲ್ಲ. ಅವನ ಕಳವಳವು ಇನ್ನಷ್ಟು ಹೆಚ್ಚಿತು. ಬೇಟೆಯಿಂದ ಬಂದ

ವಳೇ ಹೀಗೆ ಮಲಗಿದುದರಿಂದ, ಆ ವನದೇವತೆಯಾದ ಹುಲಿರಾಯನ ಶಾಪವು ನಾಟಿತೆಂದು ತಿಳಿದನು. ಹುಲಿರಾಯನ ಹೆಸರನ್ನು ಕೇಳಿದರೆ ಅವಳ ಮನವು ಸ್ವಲ್ಪ ಶಾಂತವಾಗುವಂತೆ ಕಂಡಿತು. ಸದಾ ಅವನ ವಿಷಯವನ್ನು ಕೇಳಲು ಅವಳಿಗೆ ಆತುರ. ಆದರೆ ಹೇಳುವವರು ಬೇಕಷ್ಟೆ?

ಇತ್ತ ಹೇಮೆಯಾದರೂ ಮನಸ್ಸಿನಲ್ಲಿದ್ದುದನ್ನು ಬಾಯಿಯಿಂದ ಹೇಳದಿದ್ದುದಕ್ಕೆ ಕಾರಣವಿತ್ತು. ಅವಳ ತಂದೆಯು ಅವಳಿಗೆ ಒಬ್ಬ ವರನನ್ನು ನಿಶ್ಚಯಿಸಿಬಿಟ್ಟಿದ್ದನು. ಲಗ್ನವು ಇನ್ನೊಂದೆರಡು ತಿಂಗಳಲ್ಲಿಯೇ ಜರಗುವುದಿತ್ತು. ಆದರೆ ವರನು ಹೇಮೆಯ ಮನಸ್ಸಿಗೆ ಒಪ್ಪಿದವನಾಗಿರಲಿಲ್ಲ. ಅದನ್ನು ಸ್ಪಷ್ಟವಾಗಿ ಬೀರನಲ್ಲಿ ಹೇಳುವ ಸಾಹಸವು ಅವಳಿಗಿಲ್ಲ. ಇತ್ತ ಹುಲಿರಾಯನನ್ನು ಕಂಡಂದಿನಿಂದ ಅವಳ ಮನಸ್ಸೇ ಸೂರೆಯಾಗಿ ಹೋಗಿತ್ತು. ಒಂದು ದಿನ ಬೀರನು ಅವಳನ್ನು ತೀರ ಆಗ್ರಹ ಪಡಿಸಿದನು. "ನೀನಂದಂತೆ ಮಾಡುವೆನು, ಬೇಡಿದ್ದನ್ನು ತರುವೆನು" – ಎಂದು ಹೇಳಿದನು. ಹೇಮೆಗೆ ತನ್ನ ಮನಸ್ಸಿನ ಸಂಕಟವನ್ನು ಎಷ್ಟು ದಿನಗಳ ತನಕ ಅಡಗಿಸಿರಲು ಬಂದೀತು! ಆದುದರಿಂದ ಅವಳು ಬೇಟೆಗೆ ಹೋದಾಗ ನಡೆದ ವಾರ್ತೆಯನ್ನು ಹೇಳಿದಳು. ತಾನು ನೀರಿಗಿಳಿದಾಗ, ನದಿಯಲ್ಲಿ ಘುಮುಕಿ, ತನ್ನೆದುರಿಗೆ ಬಂದುನಿಂತು, ಕೊನೆಗೆ ಹುಲಿಯನ್ನೇರಿ ಹೋದ ಹುಲಿರಾಯನೇ ತನಗೆ ಪತಿಯಾಗಬೇಕೆಂದು ಹೇಳಿದಳು. ಬೀರನಿಗೆ ಮಗಳ ಅವಸ್ಥೆಯನ್ನು ಕಂಡು ಕನಿಕರವಾಯಿತು. ಅವಳ ಸುಖವನ್ನು ಬಿಟ್ಟು ತನ್ನ ಸುಖವಿಲ್ಲ ಎಂದು ತಿಳಿದ ಅವನು ಅವಳ ಆಸೆಗೆ ವಿರೋಧಿಯಾಗಲಿಲ್ಲ.

ಅಂಥ ಹುಲಿರಾಯನು ತನಗೆ ಅಳಿಯನಾಗುವುದಾದರೆ ಅವನಿಗೂ ಸಂತೋಷವೇ. ಆದರೆ ಅಂಥದೊಂದು ದೇವ ಪುರುಷನು ಹೇಮೆಯನ್ನು ಮದುವೆಯಾಗುವನೋ ಎಂಬ ಸಂಶಯವು ಬಲವಾಯಿತು. ಇತ್ತ ಮಗಳ ಚಿಂತೆಯನ್ನು ಕಂಡು ಸುಮ್ಮನಿರಲಾರದೆ, ಕಾರ್ಯಸಾಧನೆಗಾಗಿ ಯತ್ನಿಸಲೇ ಬೇಕೆಂದು ನಿಶ್ಚಯಿಸಿದನು. ಇದಕ್ಕಾಗಿ ತನ್ನ ಕುಲಗುರುವಾದ ಕಾಳರಾಮನಲ್ಲಿಗೆ ಹೋದನು.

ಕಾಳರಾಮನು ತೀಕ್ಷ್ಣಬುದ್ಧಿಯವನು. ಅವನಿಗೆ ಮಂತ್ರ ವಾದ, ಯಕ್ಷಿಣೀ ವಿದ್ಯೆಗಳೆಲ್ಲ ಬರುತ್ತಿದ್ದುವೆಂದು ಜನರಾಡು ತ್ತಿದ್ದರು. ಅವನೊಮ್ಮೆ ತನ್ನ ವಿಚಿತ್ರ ಶಕ್ತಿಯ ದೆಸೆಯಿಂದ ಹುಲಿರಾಯನನ್ನು ವಶಪಡಿಸಿಕೊಂಡರೆ ಎಲ್ಲವೂ ಸಾಧ್ಯವಾಗ ಬಹುದು ಎಂದು ತಿಳಿದು ಅವನಲ್ಲಿಗೆ ಹೋದನು. ರಾಮನು ಬೀರನನ್ನು ಬಲು ಪ್ರೀತಿಯಿಂದ ಬರಮಾಡಿಕೊಂಡು, ಬಂದ ಕಾರಣವನ್ನು ಕೇಳಿದನು. ಎಲ್ಲವನ್ನೂ ವಿಸ್ತರಿಸಿ ಹೇಳಿಯಾ ಯಿತು. ಕಾಳರಾಮನು, ಚಿಂತೆಗೊಳಗಾಗುವ ಕಾರಣ ವಿಲ್ಲೆಂದೂ, ಹುಲಿರಾಯನನ್ನು ವಶಮಾಡಿಕೊಳ್ಳುವುದು ಅಷ್ಟೊಂದು ಕಷ್ಟದ ಕೆಲಸವಲ್ಲೆಂದೂ ಹೇಳಿದನು. ಅವನ ಸೂಚನೆಯ ಮೇರೆಗೆ ಅವರೆಲ್ಲ ಮರು ದಿನವೇ ಎರಡನೆಯ ಬಾರಿಯ ಬೇಟೆಗೆ ಹೋದರು. ಈ ಬಾರಿ ಅವರು ಹೇಮೆ ಯನ್ನು ಒಯ್ಯಲಿಲ್ಲ. ಹಾಗೆ ಒಯ್ದರೆ ಅವನು ಅವಳನ್ನು ಸೆಳೆದುಕೊಂಡು ಹೋಗಬಹುದು ಎಂಬ ಅಂಜಿಕೆಯಾಯಿತು. ಬೀರನ ಜತೆಯಲ್ಲಿ ಕಾಳರಾಮನೂ ಹೋದನು. ಅವರೆಲ್ಲ ಮೊದಲು ಹೋದ ದಾರಿಯಲ್ಲಿಯೇ ಸಾಗಿ ಹೇಮೆಯು ಈ

ಮೊದಲು ಕಂಡ ಜಲಪಾತವಿರುವ ನೀರಿನ ಹಳ್ಳವನ್ನು ಸೇರಿದರು. ಆ ಹಳ್ಳವು ಆ ಕಾಡುಪ್ರಾಂತ್ಯದಲ್ಲಿನ ಒಂದೇ ಒಂದು ನೀರಿನ ಆಸರೆಯಾದುದರಿಂದ ಅಲ್ಲಿಗೆ ಅಲ್ಲಿನ ಎಲ್ಲ ಕಾಡು ಮೃಗಗಳೂ, ಹುಲಿರಾಯನೂ ಬರಬಹುದೆಂದು ನಿಶ್ಚಯ ಮಾಡಿದರು. ಪ್ರಸಂಗ ಬಿದ್ದರೆ ಒಂದು ವಾರದ ತನಕ ನಿಲ್ಲುವುದಕ್ಕೆ ಬೇಕಾದ ಸಿದ್ಧತೆಯನ್ನು ಮಾಡಿಕೊಂಡು ಬಂದಿದ್ದರು. ಮೊದಲನೆ ದಿನ ಅವರು ಬರುವುದೇ ವೇಳೆಯಾದುದರಿಂದ ಅವರಿಗೆ ಆ ಪ್ರದೇಶದಲ್ಲಿ ಯಾರೊಬ್ಬರ ಭೇಟಿಯೂ ಆಗಲಿಲ್ಲ. ಒಂದೆರಡು ಹರಿಣಗಳು ಬಂದು ನೀರು ಕುಡಿದುಹೋದುವು. ಮರುದಿನ ನಡು ಮಧ್ಯಾಹ್ನ ಹದಿನೆರಡು ಘಂಟೆಗೆ ಸರಿಯಾಗಿ ಹುಲಿರಾಯನು ನೀರಿನ ಜೋಗಿನ ಬಳಿಗೆ ಬಂದು ಅದರಲ್ಲಿ ಧುಮುಕಿದನು. ಬೀರನ ಪಡೆಯವರು ಪೊದೆಗಳಲ್ಲಿ ಮರೆಯಾಗಿ ಅವಿತುಕೊಂಡಿದ್ದರು. ಕಾಳರಾಮನು ನೀರು ಬೀಳುವ ಜಾಗಕ್ಕೂ ತುಸು ಹಿಂದೆ ಮರೆಯಾಗಿ ಅಡಗಿದ್ದು, ಅವರು ಬರುವ ವೇಳೆಗೆ ಸರಿಯಾಗಿ ಒಂದು ಔಷಧಿಯ ಹುಡಿಯನ್ನು ನೀರಲ್ಲಿ ಕಲಸಿಬಿಟ್ಟನು. ಹುಲಿರಾಯನು ಮುಣುಗಿ ಮೇಲೆ ಬರುವವನು ಸ್ಮೃತಿಯಿಲ್ಲದೆ ಬಂದನು. ಇದು ಕಾಳರಾಮನ ಔಷಧಿಯ ಗುಣ. ಸರಿ, ಬೀರನ ಪಡೆಯವರು ಅತಿ ಹಿಗ್ಗಿನಿಂದ ಅವನನ್ನು ನೀರ ಮೇಲಕ್ಕೆ ಎಳೆದುತಂದು ಒಂದು ಡೋಲಿಯಲ್ಲಿರಿಸಿ, ತಮ್ಮೂರಿಗೆ ಬಲು ವೇಗದಿಂದ ಒಯ್ದರು.

ಹುಲಿರಾಯನಿಗೆ ಎಚ್ಚರವಾಗುವಾಗ ಅವನು ಬೀರನ ಅರಮನೆಯ ಕೋಣೆಯಲ್ಲಿದ್ದನು. ಎಲ್ಲ ಬಾಗಿಲುಗಳೂ ಮುಚ್ಚಿದ್ದುವು. ಬಳಿಯಲ್ಲಿ ಹೇಮೆಯು ಕುಳಿತು ಅವನಿಗೆ

ಗಾಳಿ ಬೀಸುತ್ತಿದ್ದಳು. ರಾಯನಿಗೆ ಆಶ್ಚರ್ಯವಾಯಿತು— ತಾನು ಎಲ್ಲಿಂದ ಬಂದೆನು, ಎಲ್ಲಿರುವೆನು, ಎದುರಿಗಿರುವವಳು ಯಾರು— ಎಂದು ಭ್ರಮೆಯಾಯಿತು. ಕೆಲವು ದಿನಗಳ ಹಿಂದೆ ನೋಡಿದ ಹೇಮೆಯ ನೆನಪಾಯಿತು! ಇತ್ತ ನದಿಯಲ್ಲಿ ಅದೇ ನಡು ಬಿಸಿಲಿಗೆ ಧುಮುಕಿದ ನೆನಪಾಯಿತು. ಸುತ್ತ ನೋಡುತ್ತಾನೆ— ನದಿಯಿಲ್ಲ; ನೀರಿಲ್ಲ. ಇರುವುದು ಅರಮನೆ! ಹೇಮೆಯೂ ಇರುವಳು! ಅವಳನ್ನು ಕಂಡಂದಿನಿಂದ ಅವನ ಮನಸ್ಸು ಭ್ರಮಿತವಾಗಿತ್ತು. ಆದುದರಿಂದ ಇದೆಲ್ಲ ಹೇಮೆಯ ಸ್ವಪ್ನವೆಂದು ತಿಳಿದನು. ಎದುರು ಕೈಚಾಚಿ ನೋಡಿದನು. ಹೇಮೆಯು ನಗುತ್ತ ನಾಚುಗೆಯಿಂದ ಕುಳಿತ್ತಿದ್ದಳು. ಕೈಗೆ ಹೇಮೆಯ ತೋಳೂ ತಡೆಯಿತು. ಇದು ಸ್ವಪ್ನವಲ್ಲೆಂದು ತಿಳಿದನು! ತನ್ನ ಹುಲಿಭಾಷೆಯಿಂದ ಮಾತನಾಡಿದನು. ಹೇಮೆಗೆ ಒಂದಕ್ಷರವೂ ತಿಳಿಯಲಿಲ್ಲ. ಹೇಮೆಯು ಮಾತನಾಡಿದಳು. ಅವಳಾಡಿದುದು ಇವನಿಗೆ ತಿಳಿಯಲೂ ಇಲ್ಲ.

ಒಬ್ಬರು ಇನ್ನೊಬ್ಬರನ್ನು ಕಾಣುವರು. ಅವರ ಕಣ್ಣುಗಳೇ ಮಾತನಾಡುವುವು. ಈ ರೀತಿಯಿಂದ ರಾಯಗೆ ಹೇಮೆಯಲ್ಲಿ ಪ್ರೇಮವು ಬೆಳೆಯಿತು. ಅವಳೂ ಸುಖಿಯಾದಳು. ಆದರೂ, ಇಷ್ಟರತನಕ ಇತರ ಪುರುಷರಾರೂ ಅವರ ಅಂತಃಪುರವನ್ನು ಪ್ರವೇಶಿಸಲಿಲ್ಲ. ಅವರು ಸ್ನೇಹಿತರಾಗಿ ಒಂದು ವಾರವೇ ಕಳೆಯಿತು. ರಾಯನಿಗೆ ತನ್ನ ಕಾಡಿನ ಬಳಗದವರ ಸಂಪೂರ್ಣ ಮರವೆಯಾಯಿತು.

ಇತ್ತ ಹುಲಿಯಪ್ಪ, ಹುಲಿಯಮ್ಮಂದಿರು ರಾಯನನ್ನು ಕಾಣದೆ ಕಾತರಗೊಂಡರು. ವನದ ಮೃಗಗಳೆಲ್ಲ ಅಳತೊಡಗಿ



ಮುವು. ಹುಲಿಯಮ್ಮಗೆ ಸಿಟ್ಟೇರಿತು. ತನ್ನ ಮಗನನ್ನು ಯಾರೋ ಕದ್ದಿರಬೇಕು ಇಲ್ಲವೆ ಕೊಂದಿರಬೇಕು ಎಂದು ಸೇಡನ್ನು ಸಾಧಿಸಲು ಯೋಚಿಸಿದುವು. ನೀರಿನ ಹಳ್ಳಕ್ಕೆ ಬಂದುವು. ಅಲ್ಲಿ ಮರಳಿನ ದಿನ್ನೆಯ ಮೇಲಿರುವ ಕಾಲು ಹೆಜ್ಜೆಗಳನ್ನು ಕಂಡು ವೈರಿಗಳು ಮನುಷ್ಯರೇ ಎಂದು ನಿರ್ಧರಿಸಿದುವು.

ರಾತ್ರಿ ಎರಡೂ ಹುಲಿಗಳು ಬೀರನ ಊರಲ್ಲಿ ಮನೆಮನೆ ತಿರುಗಾಡತೊಡಗಿದುವು. ಘರ್ಜಿಸತೊಡಗಿದುವು. ಕೋಪ ದಿಂದ ಬಂದವರನ್ನು ಬೆದರಿಸತೊಡಗಿದುವು. ಬೀರನಿಗೆ ಸುದ್ದಿ ಹೋಯಿತು. ಬೀರನು ರಾಯನಿಗೆ ತನ್ನ ಮಗಳಲ್ಲಿ ಪ್ರೀತಿಯು ಬೇರೂರಿದ ಬಗೆಯು ತಿಳಿದು, ಅಹಂಕಾರದಿಂದ, ಆ ಹುಲಿ ಗಳನ್ನು ಕೊಲ್ಲಲು ಅನುಜ್ಞೆಯಿತ್ತನು. ಚತುರ ಬಿಲ್ಲಾಳೊಬ್ಬನು

ಸಮಯಸಾಧಿಸಿ ಹುಲಿಯಮ್ಮನಿಗೆ ಒಂದು ಅಂಬನ್ನೆಸೆದನು. ಹುಲಿಯಮ್ಮನು ಅತಿ ಗಟ್ಟಿಯಾದ ಘರ್ಜನೆಮಾಡಿ ನೆಲವನ್ನು ಹಿಡಿದಳು. ಹುಲಿಯಪ್ಪನು ಅಂಜಿ ಕಾಡಿಗೆ ಓಡಿದನು. ಈ ಕೂಗು ಅರಮನೆಯೊಳಗಿಪ್ಪ ರಾಯಗೆ ಕೇಳಿಸಿತು. ಅವನು ಗಾಬರಿಗೊಂಡು, ಅರಮನೆಯ ಕದಗಳನ್ನು ಮುರಿದು ಹೊರಕ್ಕೆ ಬಂದನು. ಕೇರಿಯಲ್ಲಿ ನರಳುತ್ತಿರುವ ಹುಲಿಯಮ್ಮನಿದ್ದಳು. ಅಲ್ಲಿಗೆ ಓಡಿಹೋಗಿ ಅವಳನ್ನು ತಬ್ಬಿಕೊಂಡನು. ಅಂಬನ್ನು ಕಿತ್ತನು. ದೂರದಲ್ಲಿ ಬಿಲ್ಲುಹಿಡಿದು ನಿಂತಿದ್ದ ಅಂಬುಗಾರನ ಬಳಿಗೆ ಹೋಗಿ ಅವನನ್ನು ನೆಲಕ್ಕಪ್ಪಳಿಸಿಬಿಟ್ಟನು. ಈಗ ರಾಯನು ರುದ್ರನಂತಾದನು. ಒಂದು ಕಡೆ ಸಿಟ್ಟು, ಒಂದು ಕಡೆ ತಾಯಿಯ ನೋವನ್ನು ಕಂಡು ವ್ಯಥೆ. ಇವನೂ ಸಿಟ್ಟಿನಿಂದ ಘರ್ಜಿಸಿದನು. ಕೇರಿಯೇ ನಡುಗಿತು. ಊರ ಜನರೆಲ್ಲ ಹೆದರಿಕೊಂಡರು. ಹೇಮೆಯು ಇದೇನೆಂದು ನೋಡಲು ಓಡಿಬಂದಳು. ರಾಯನು ಹುಲಿಯೊಂದರ ಬಳಿ ಅಳುತ್ತ ಕುಳಿತಿದ್ದನು. ಅವಳಿಗೂ ಆ ಗಳಿಗೆಯಲ್ಲಿ ಅವನನ್ನು ಮಾತನಾಡಿಸಲು ಧೈರ್ಯವು ಬರಲಿಲ್ಲ. ಬೀರನಲ್ಲಿಗೆ ಓಡಿಹೋಗಿ ಅವನನ್ನು ಎಳೆದುತಂದು ಶಪಿಸಿದಳು. ಇನ್ನು ರಾಯನು ತನ್ನಿಂದ ದೂರವಾಗುವನಲ್ಲಾ ಎಂದು ಅತ್ತಳು. ಬೀರನಿಗೆ ತನ್ನ ಅವಿವೇಕಕ್ಕಾಗಿ ದುಃಖವಾಯಿತು. ಇತರ ಉಪಾಯಗಳನ್ನು ಕಾಣದೆ ಅವನು ಕಾಳರಾಮನನ್ನು ಕರೆಯಿಸಿದನು. ಕಾಳರಾಮನು ನಗುತ್ತ ಬಂದನು. ಬಂದವನು, ರಾಯನನ್ನು ಲಕ್ಷಿಸದೆ, ಹುಲಿಯಮ್ಮನ ಬಳಿಗೆ ಹೋಗಿ ಅವರ ಗಾಯವನ್ನು ಸವರಿ ಏನೋ ಔಷಧಿಯನ್ನು ಲೇಪಿಸಿದನು. ಹುಲಿ

ಯಮ್ಮನ ವೇದನೆಯು ಕಡಿಮೆಯಾದಂತಾಯಿತು ಒಂದು ಘಳಿಗೆಯ ಅವಧಿಯಲ್ಲಿ ಹುಲಿಯಮ್ಮನು ಚೈತನ್ಯಗೊಂಡು ಕುಳಿತಳು. ಕಾಳರಾಮನು ಹೊರಟುಹೋದನು. ರಾಯನಿಗೆ ಇದೂ ಒಂದು ಸ್ವಪ್ನವೇ ಎಂದೆನಿಸಿತು. ಕಾಳರಾಮನ ಹೇಳಿಕೆಯಂತೆ, ಹೇಮೆಯು ನಡುಗುತ್ತ ರಾಯನಲ್ಲಿಗೆ ಹೋದಳು. ಅಲ್ಲೇ ದೂರದಲ್ಲಿ ನಿಂತಳು. ಬಳಿಗೆ ಹೋಗುವ ಸಾಹಸವಿಲ್ಲ. ಅವಳ ಕಣ್ಣುಗಳಿಂದ ನೀರಹನಿಗಳು ಒಸರುತ್ತಿದ್ದುವು. ತಂದೆಯ ತಪ್ಪಿಗಾಗಿ ಅವಳು ದುಃಖಿಸುತ್ತಿದ್ದಳು. ರಾಯನ ಮೃದು ಹೃದಯವು ಕರಗಿತು. ಅವಳನ್ನು ಬಳಿಗೆ ಬರಲು ಸನ್ನೆಮಾಡಿ ಕುಳ್ಳಿರಿಸಿಕೊಂಡನು. ಹುಲಿಯಮ್ಮಗೆ ಪೂರ್ಣ ಚೇತನವಾಯಿತು. ರಾಯನನ್ನು ಕಂಡು ಅದರ ಎಲ್ಲ ನೋವೂ ಮರವೆಯಾಯಿತು. ರಾಯನು ಹೇಮೆಯನ್ನು ಎತ್ತಿಕೊಂಡು ಅದರ ಮೇಲೆ ಕುಳಿತನು. ಮೂವರೂ ಅಲ್ಲಿಂದ ಕಾಣೆಯಾದರು.

---

## 6. ನೀರಲ್ಲಿ ಹುಟ್ಟಿ ನೀರನ್ನು ಸೇರಿತು.

ಹುಲಿಯಪ್ಪನು ತನ್ನ ಮಡದಿಯು ಸತ್ತಳೆಂದು ತಿಳಿದು ಮರಳಿ ತನ್ನ ಗವಿಯನ್ನು ಸೇರಿದನು. ಆದರೆ ಅವನ ಮನಸ್ಸಿನ ಸಿಟ್ಟು ಶಾಂತವಾಗಲಿಲ್ಲ. ಹೆಂಡತಿಯನ್ನು ಕೊಂದರು; ಮಗನನ್ನು ಒಯ್ದರು. ಇವರ ಸೇಡನ್ನು ತೀರಿಸಲು ತಾವೆಲ್ಲರೂ ಸೇರಿ ಏನಾದರೊಂದು ಹೊಂತನ್ನು ಮಾಡಬೇಕೆಂದು ನಿಶ್ಚಯಿಸಿದನು. ಅದಕ್ಕೆಂದು ಹೋದವನೇ ಎಲ್ಲ ಮೃಗಗಳ ಸಭೆಯನ್ನು ಕರೆದನು. ಆ ಕಾಡಿನ ಪ್ರಾಣಿಗಳೆಲ್ಲಾ ಸೇರಿ

ದುವು. ರಾಯನು ಹೋದುದಕ್ಕಾಗಿ ದುಃಖಗೊಂಡ ಮೃಗಗಳು ಈ ಸುದ್ದಿಯನ್ನು ಕೇಳಿ ಮತ್ತಷ್ಟು ದುಃಖಗೊಂಡುವು. ಅವುಗಳ ಮನಸ್ಸಿನಲ್ಲೂ ದ್ವೇಷವು ತುಂಬಿತು. ಈ ವಿಷಯದಲ್ಲಿ ಹರಿಣ ಹುಲಿಗಳೆಂಬ ಭೇದವಿಲ್ಲದೆ ಒಮ್ಮತವಾದುವು. ಅವನಿಂದಲೇ ತಮ್ಮಲ್ಲಿ ಐಕ್ಯವುಂಟಾಗಿತ್ತೆಂದು ಅವಕ್ಕೆ ಗೊತ್ತಿದ್ದಿಲ್ಲವೇ? ಅಂದಿನಿಂದ ಅವು, ರಾಯನು ಮರಳಿ ದೊರೆಯುವ ತನಕ ತಾವು ತಮ್ಮ ಊರಲ್ಲೇ ನಿಲ್ಲಲಾಗದು ಎಂದು ಗೊತ್ತುಮಾಡಿ ಹೊರಟುವು. ಎಲ್ಲ ಪ್ರಾಣಿಗಳೂ ಹಟಹಿಡಿದು ಬೀರನ ಪರಿವಾರವನ್ನು ಹಾಳುಕೆಡಯಬೇಕೆಂದು ಎಣಿಸಿ, ಹೊರಟುವು.

ಹಾದಿಯಲ್ಲೇ ಅವರಿಗೆ ಹೇಮೆ, ರಾಯ, ಹುಲಿಯಮ್ಮರ ಭೇಟಿಯಾಯಿತು. ಹುಲಿಯಮ್ಮನು ಬದುಕಿದುದನ್ನು ಕಂಡು ಹುಲಿಯಪ್ಪನಿಗೆ ಹಿಡಿಯದಷ್ಟು ಸಂತೋಷವಾಯಿತು. ಇತ್ತ ರಾಯನು ತಮ್ಮನ್ನು ಸೇರಲು, ಮನುಷ್ಯರ ಮೇಲಿನ ಹಗೆತನವನ್ನು ಮರೆತುವು. ಆದರೆ ಹೇಮೆಯ ಮುಖವು ಅವುಗಳಿಗೆ ತೀರ ನವೀನವು. ಇದು ಅವಕ್ಕೆ ಸಂತೋಷವನ್ನುಂಟು ಮಾಡಲಿಲ್ಲ. ಬದಲು ಅವಳ ಮೇಲೆ ಸಂಶಯವೇ ಆಯಿತು! ಆದರೆ ರಾಯನು ಮಾಡಿದ ಕೆಲಸಕ್ಕೆ ಅವುಗಳ ಒಪ್ಪಿಗೆಯಿಲ್ಲದೆ ಬೇರೆ ಉಂಟೇ?

ಹೇಮೆಯೂ ಕಾಡನ್ನು ಸೇರಿ ರಾಯನ ಮಡದಿಯಾದಳು. ಅವಳ ಚಿಂತೆಯೂ ದೂರಾಯಿತು. ಆದರೆ ತಂದೆಯನ್ನು ತೀರ ಬಿಟ್ಟಿರಲು ಅವಳಿಗೆ ಮನಸ್ಸಿರಲಿಲ್ಲ. ಅವಳ ಮನಸ್ಸಿನಲ್ಲಿ ರಾಯನು ಸಹ ಬೀರನ ಮನೆಯಲ್ಲಿ ಇರಬೇಕೆಂದು ಇತ್ತು. ಆದರೆ ಈ ಮೃಗಗಳ ಸಂಸಾರವನ್ನೂ ಅವುಗಳ ಮೇಲೆ ರಾಯ

ನಿಗಿದ್ದ ಪ್ರೇಮವನ್ನೂ ಕಂಡು ಆ ಸುದ್ದಿಯನ್ನು ತೆಗೆಯದೆ ಮೌನವಾದಳು. ಇತ್ತ ಬೀರನು ಚಿಂತೆಯಲ್ಲಿ ಮುಣುಗಿದನು. ರಾಯನ ಶಕ್ತಿಯು ಅದ್ಭುತವೆಂದು ತಿಳಿದನು. ಅವನಂಥ ಅಳಿಯನು ತನಗೆ ಸಿಕ್ಕಿದ್ದು ಅವನಿಗೆ ಹರುಷವನ್ನುಂಟು ಮಾಡಿತು. ಆದರೆ ಹೇಮೆಯಿಂದ ದೂರಾಗುವುದು ಕಷ್ಟವಾ ಯಿತು. ಇನ್ನು ಹೇಮೆಯು ಮನೆಗೆ ಬರುವಳೇ? — ಎಂಬ ಸಂಶಯವೂ ಬಂದಿತು. ಅವಳಾಗಿಯೇ ತಂದೆಯನ್ನು ಕಾಣ ಬೇಕಲ್ಲದೆ, ಇವನಾಗಿ ಅವಳಲ್ಲಿಗೆ ಬರಲು ಧೈರ್ಯವಿಲ್ಲ. ಬೀರನು ಕಾಳರಾವುನಲ್ಲಿ ನಾನಾ ತರದಿಂದ ತನ್ನ ದುಃಖವನ್ನು ಹೇಳಿಕೊಂಡನು. ಆಗವನು “ನಿನ್ನ ಹೇಮೆಯು ಒಳ್ಳೆ ಹುಡುಗಿ, ನಿನ್ನನ್ನೆಂದೂ ಮರೆಯಳು. ಅವಳು ರಾಯನ ಪ್ರೇಮವನ್ನು ಗಳಿಸಿ ಆಗಾಗ ನಿನ್ನ ಮನೆಗೆ ಬರುವಳು —” ಎಂದು ಸಮಾಧಾನವಿತ್ತನು.

ಹೇಮೆಯೂ ತವರುಮನೆಯ ಚಿಂತೆಯನ್ನು ಮರೆತಳು. ಅವಳದೀಗ ದೊಡ್ಡ ಕುಟುಂಬ. ಹುಲಿರಾಯನು ಗಂಡ, ಹುಲಿಯಪ್ಪ ಮಾವ, ಹುಲಿಯಮ್ಮನು ಅತ್ತೆ. ಇನ್ನೂ ಅನೇಕ ಕಾಡುಗೆಳೆಯರು. ಆಟವಾಡಲು ನದಿ. ಎಷ್ಟೋ ಸಾರಿ ಹೇಮೆಯು ಸಂತೋಷದಿಂದ ಕುಣಿಯುವಳು. ಹಾಡುವಳು! ಅವಳನ್ನು ಕಂಡ ರಾಯನು ಹಾಡುವುದಕ್ಕೂ ಕುಣಿಯುವು ದಕ್ಕೂ ಕಲಿತನು. ಒಮ್ಮೆ ಮರೆತುಹೋದ ಮನುಷ್ಯ ಭಾಷೆಯು ಅವನಿಗೀಗ ತಿರುಗಿ ತಿಳಿದಿದೆ.

ಒಂದು ದಿನ ಹೇಮೆಯು ಚೇಷ್ಟೆಗಾಗಿ “ರಾಯಾ, ನೋಡು ನನಗೆ ತಂದೆತಾಯಿಗಳಿರುವರು. ಈ ಯಾವತ್ತು

ಕಾಡುಪ್ರಾಣಿಗಳಿಗಿರುವರು. ನಿನಗಾರು?" ಎಂದು ಕೇಳಿದಳು. ರಾಯನು ಹುಲಿಯಪ್ಪ, ಹುಲಿಯಮ್ಮನನ್ನು ತೋರಿಸಿದನು. ಅವಳಿಗೆ ನಗುಬಂತು. "ನೀನು ಹುಲಿಯ ಮಗನಾದರೆ ಹುಲಿಯಂತೆ ಕೈಕಾಲುಗಳಿರಬೇಕು. ನೀನು ನನ್ನಂತೆ ಇರುವೆ. ಮಕ್ಕಳು ತಂದೆಯಂತಿರಬೇಕಲ್ಲವೇ" ಎಂದು ಕೇಳಿದಳು. ರಾಯನಿಗೆ ಸಿಟ್ಟುಬಂದಿತು. ಪ್ರಾಯಶಃ ಹೇಮೆಯು ತನ್ನ ತಂದೆತಾಯಿಗಳ ವಿಷಯದಲ್ಲಿ ಕೆಟ್ಟ ಬುದ್ಧಿಯನ್ನು ಹುಟ್ಟಿಸುತ್ತಿರುವಳು ಎಂದು ತಿಳಿದನು. ಆದರೆ ಹೇಮೆಯ ಮುಖವನ್ನು ಕಾಣಲು ಸಂಶಯವು ಮರೆಯಿತು. ಅವನಿಗೂ ಅದೇ ವಿಚಾರವು ಹೊಳೆಯಿತು. ಅವಕ್ಕಾಗಿ ಹುಲಿಯಪ್ಪನ ಬಳಿಗೆ ಹೋಗಿ—"ಅಪ್ಪಾ, ಸಿಟ್ಟಾಗಬೇಡ. ನಾನಿದುವರೆಗೆ ಈ ಪ್ರಶ್ನೆಯನ್ನು ಕೇಳಲಿಲ್ಲ. ನಾನೆಲ್ಲಿಂದ ಬಂದೆನು, ನನ್ನ ತಂದೆ ತಾಯಿಗಳಾರು? ನಾನು ನಿಮ್ಮ ಮಗನಾದರೆ ನಿಮ್ಮಂತಿರ



ಬೇಡವೇ" — ಎಂದು ಕೇಳಿದನು. ಹುಲಿಯಪ್ಪನು ಹಿಂದಿನ ಸುದ್ದಿಯನ್ನೆಲ್ಲಾ ಹೇಳಿದನು. ಮಳೆಯಿಂದ ತಾವು ಉಪವಾಸ ಬಿದ್ದುದನ್ನೂ, ಬೇಟೆಗೆ ಹೊರಡುವ ವೇಳೆಗೆ ಸರಿಯಾಗಿ ದಾರಿಯಲ್ಲಿ ಇವನು ಆಟವಾಡುತ್ತಿದ್ದುದನ್ನೂ, ತಾನು ಒಯ್ದುದನ್ನೂ— ಎಲ್ಲವನ್ನೂ ಹೇಳಿದನು. ರಾಯನಿಗೆ ಸಮಾಧಾನವಾಯಿತು. ಹೇಮೆಗೆ ಅವನ್ನು ತಿಳಿಸಿದನು. ಅಂದಿನಿಂದ ರಾಯನ ಮನಸ್ಸಿನಲ್ಲಿ ಹೊಸತೊಂದು ಚಿಂತೆಹುಟ್ಟಿತು. ತನ್ನನ್ನು ಹೆತ್ತವರನ್ನು ತಾನು ಮರತೆನಲ್ಲಾ, ಅವರನ್ನು ತಾನು ಕಾಣಬಾರದೇ— ಎಂದು.

ಇದಕ್ಕಾಗಿಯೇ ಅವನು ಆ ಕಾಡಿನ ಸುತ್ತ ಹೇಮೆಯನ್ನು ಕೂಡಿ ಆಗಾಗ ಸಂಚರಿಸತೊಡಗಿದನು. ಆದರೆ ಇದರಿಂದ ಏನು ಲಾಭವಾದೀತು? ಒಂದು ದಿನ, ಹೇಮೆಯೂ ರಾಯರೂ ಅರಣ್ಯದಲ್ಲಿ ಬಲುಹೊತ್ತು ಸಂಚರಿಸಿ, ಆಯಾಸವಾಯಿತೆಂದು ಒಂದು ಮರದ ನೆರಳಿನಲ್ಲಿ ವಿಶ್ರಾಂತಿ ತೆಗೆದುಕೊಂಡರು. ಸ್ವಲ್ಪ ಹೊತ್ತಿನಲ್ಲಿ, ಆ ಕಾಡುಹಾದಿಯಾಗಿ ಇಬ್ಬರು ದಾರಿಕಾರರು ಬಂದರು. ಅಲ್ಲೇನು ಹಾದಿಯಿದ್ದಿರಲಿಲ್ಲ. ಆದರೆ ಅವರೇಕೋ ಅತ್ತಿತ್ತ ಅಲೆಯುತ್ತ ಬಂದಂತೆ ಕಂಡಿತು. ಬಂದವರಲ್ಲಿ ಒಬ್ಬನು ಮುದುಕನು, ಇನ್ನೊಬ್ಬಳು ಮುದುಕಿ. ಅವರಿಗೆ ನಡೆಯುವುದಕ್ಕೂ ಕೂಡ ಕಷ್ಟವಾಗುತ್ತಿತ್ತು. ಅವರು ಅಲ್ಲೇ ಸಮೀಪ ಬಂದು ಕುಳಿತುಕೊಂಡರು. ಮುದುಕನಿಗೆ ಕಣ್ಣೀರು ಬಂತು — ತನ್ನ ಮುದಿಯನ್ನು ಕರೆದು . . . . "ನೆನಪಿದೆಯೇ? ಅಲ್ಲಿ ನೋಡು. ಆ ಮರದ ಕೆಳಗೆ ಈಗಿಬ್ಬರು ಮಲಗಿರುವರಲ್ಲ— ಅಲ್ಲೇ ಅಲ್ಲವೆ ನಾವು ಮಲಗಿ

ದುದು ಆ ರಾತ್ರಿ! ಆ ಮಳೆಗಾಳಿಯಲ್ಲಿ ಮನೆಕಳೆದುಕೊಂಡು ಬಂದು! ಇದಲ್ಲವೇ ನಮ್ಮ ರಾಯನನ್ನು ನುಂಗಿದ ನೆಲ!"— ಎಂದನು. ಅವಳಿಗೂ ದುಃಖವಾಯಿತು. ಅವರೂ ಅಲ್ಲಿಯೇ ನಿಂತು ಅತ್ತರು. ಹೇಮೆಗೆ ಈ ಮಾತುಗಳು ಕೇಳಿಸಿತು. ಅವಳು ರಾಯನ ಮುಖವನ್ನು ಕಂಡಳು. ಇವರ ಮುಖವನ್ನು ಕಂಡಳು. ಇವನು ತರುಣನು. ಅವರು ಮುದುಕರು. ಆದರೂ ಮುಖದ ಚಹರೆಯಲ್ಲಿ ಹೋಲಿಕೆಯಿತ್ತು. ಈ ಹುಲಿರಾಯನು ರಾಯಗೆ ಹೇಳಿದ ಕಥೆಯು ನೆನಪಾಯಿತು. ರಾಯನನ್ನು ಎಚ್ಚರಿಸಿ—"ಇವರೇ ನಿನ್ನ ಕಳೆದು ಹೋದ ತಾಯಿತಂದೆಗಳು" ಎಂದು ಸಂಗತಿಯನ್ನು ತಿಳಿಸಿದಳು. ರಾಯನು ಓಡೋಡಿ ಆ ಮುದುಕನ ಕಾಲಿಗೆರಗಿದನು! ಇದೇನೆಂದು ಅವರಿಗೆ ಭ್ರಮೆಯಾಯಿತು! "ಅಪ್ಪಾ, ಅಮ್ಮಾ— ಹುಲಿರಾಯನೊಬ್ಬನು ನನ್ನನ್ನು ಒಯ್ದು ನಾನು ನಿಮ್ಮಿಂದ ದೂರಾದ ಮಗನಲ್ಲವೇ?" ಎಂದನು. ಅವರು ತಮಗಾರೋ ಚೇಷ್ಟೆಮಾಡುತ್ತಿರುವರು ಎಂದು ತಿಳಿದರು. ಹೇಮೆಯು ರಾಯನ ಮತ್ತು ತನ್ನ ಸಂಗತಿಯನ್ನು ತಿಳಿಸಿದಳು. ತಿರುಗಿ ರಾಯನ ತಂದೆತಾಯಿಗಳಾದ ಸುಬ್ಬು ಲಚುಮಿಯರು ಅವನಿಗೆ ಸಿಕ್ಕಿದರು. ಅವರಿಷ್ಟು ವರುಷ ಯಾತ್ರೆಗಾಗಿ ಸಂಚರಿಸಿ ಸಂಚರಿಸಿ ಬೇಸತ್ತು—'ಇನ್ನು ವಯಸ್ಸಾಯಿತು. ಹುಟ್ಟಿದ ನೆಲದಲ್ಲೇ ಸಾಯುತ್ತೇವೆ' ಎಂದು ಮೊದಲಿನ ಮನೆಯಿದ್ದ ಸ್ಥಳಕ್ಕೆ ಬಂದು ನಿಲ್ಲಲು ನಿಶ್ಚಯಮಾಡಿ ಬಂದರು. ಸಮಯಕ್ಕೆ ಸರಿಯಾಗಿ ಹೋದ ಮಗನೂ ಸಿಕ್ಕಿದನು. ಆ ಮುದುಕ ಮುದುಕಿಯರ ಅಂದಿನ ವರೆಗಿನ ಚಿಂತೆ ದೂರಾಯಿತು. ಅವರು

ಅಲ್ಲೇ ಮಾತನಾಡುತ್ತ ಕುಳಿತರು. ಆ ಹಾದಿಯಾಗಿ ಹುಲಿಯಪ್ಪ ಹುಲಿಯಮ್ಮರು ಬಂದರು. ರಾಯನ ತಂದೆತಾಯಿಗಳು ಗಾಬರಿಯಾಗಿ ಕೂಗಿದರು. ರಾಯನು ಅವರೇ ತನ್ನ ಸಾಕುತಾಯಿಗಳೆಂದನು. ಹುಲಿಯ ಕರುಣೆಯನ್ನು ಕಂಡು ಅವರಿಗೂ ಹರುಷವಾಯಿತು. ಹುಲಿಯಪ್ಪನು ಬರಲು ಅವನಿಗೆಲ್ಲಾ ಸಂಗತಿಯನ್ನು ತಿಳಿಸಿದನು. ಎಲ್ಲರಿಗೂ ಸಂತೋಷವಾಯಿತು.

ಅಂದಿನಿಂದ ರಾಯನು ಹೇಮೆಯನ್ನು ಕೂಡಿಕೊಂಡು ತಂದೆತಾಯಿಗಳೊಡನೆ, ಸೇತ್ರಾಪತೀ ದಂಡೆಯ ಮೊದಲಿನ ದೋಣಿ ನಿಲ್ಲುವ ಕಡವಿನಲ್ಲಿ ತಿರುಗಿ ಒಂದು ಮನೆಕಟ್ಟಿ ವಾಸಮಾಡತೊಡಗಿದನು. ಅವನಲ್ಲಿಗೆ ಆಗಾಗ ಹುಲಿಯಪ್ಪ ಹುಲಿಯಮ್ಮಂದಿರು ಬರುತ್ತಿದ್ದರು. ಇವರೂ ಅಲ್ಲಿಗೆ ಹೋಗುತ್ತಿದ್ದರು. ತನಗೆ ತಂದೆತಾಯಿಗಳನ್ನು ಕಂಡು ಆನಂದವಾದಂತೆ, ಹೇಮೆಗೂ ಆಗಬೇಕೆಂದು ಅವಳೊಡನೆ ಅವನೂ ಆಗಾಗ ಬೀರನಲ್ಲಿಗೆ ಹೋಗಿ ಬರುತ್ತಿದ್ದನು.

